# ಆರೋಗ್ಯ ಧರ್ಮದರ್ಶನ



( ಮೊದಲನೆಯ ಭಾಗ )




[ ೧೦೦೦ ಪ್ರತಿಗಳು ]



ಲೇಖಕರು:—

ಶ್ರೀ. ಚೆನ್ನಬಸವಸ್ವಾಮಿ ಕಲ್ಲಮಠ

ಬೈಲಹೊಂಗಲ [ ಸಂಸ್ಥಾನ ಕಿತ್ತೂರ ]

ಬೆಲೆ ೦—೧೨—೦

ಮುದ್ರಕರು
ಎಮ್. ಬಿ. ವಂಟಿಮುತ್ತಿ
ವಿಶ್ವಭಾರತ ಪ್ರಿಂ. ಮತ್ತು ಪ. ಕಂ. ಲಿ.,
ಬೆಳಗಾಂವ.

ಮೊದಲನೆಯ ಮುದ್ರಣ


ಪ್ರಕಾಶಕರು
ವ್ಹಿ. ಬಿ. ಶೀಗೀಹಳ್ಳಿ.
ರಿಟಾಯರ್ಡ ಸುಪ್ರರವಾಯಿಝರ,
ತುರಮರಿ, ತಾ|| ಬೈಲಹೊಂಗಲ

# ಅರಿಕೆ.

ಮನುಷ್ಯನು ಸದೈವ ಸುಖಾಪೇಕ್ಷೆಯಾಗಿದ್ದಾನೆ. ಆ ಸುಖಸಂಪಾದನೆಗಾಗಿ ಅನೇಕ ಸಾಧನ ಸಾಮುಗ್ರಿಗಳನ್ನು ಸಂಗ್ರಹಿಸಿಕೊಂಡಿದ್ದಾನೆ. ಅವುಗಳಲ್ಲಿ ದೇಹವು ಮೊದಲನೆಯ ಸಾಧನವಾಗಿದೆ. ಶರೀರವು ಒಳ್ಳೆಯ ಸ್ಥಿತಿಯಲ್ಲಿದ್ದರೆ ಮಾತ್ರ ಸುಖವನ್ನನುಭವಿಸಲು ಅವನಿಗೆ ಅನುಕೂಲವು. ಇಲ್ಲವಾದರೆ ಸಕಲ ಸುಖಗಳೂ ನಿರರ್ಥಕಗಳೇ ಸರಿ. ಆದ್ದರಿಂದಲೇ " ಶರೀರಮಾದ್ಯಂ ಖಲುಧರ್ಮಸಾಧನಂ " ಎಂದು ಪಂಡಿತೋತ್ತಮರಿಂದ ಆದೇಶಿಸಲಾಗಿದೆ. ಅಂದರೆ ಧರ್ಮಾರ್ಥ ಕಾಮಮೋಕ್ಷಸಾಧನೆಗೆ ಶರೀರಸಂಪತ್ತಿಯೇ ಮುಖ್ಯವಾಗಿದೆ. ಈ ಸಂಪತ್ತಿಗೆ ಸದಾಚಾರವೇ ಮೂಲವು. ಸದಾಚಾರವು ನೀತಿಯ ಗರ್ಭದಲ್ಲಿ ಹುದುಗಿಕೊಂಡಿದೆ. ಮಾನವನ ಉನ್ನತಿಗೆ ನೀತಿಯೇ ಬೀಜವು. ಈ ನೀತಿಯ ಮಹತ್ವವನ್ನು ವಿಶ್ವಕ್ಕೆಲ್ಲ ತಿಳಿಸಲು ಲಾಕ್, ಹೀಗಲ್, ಬೆಂಥ್ಯಾಮ, ಎಪಿಕ್ಯೂರಸ್, ಪ್ಲೇಟೊ ಮೊದಲಾದ ಪಾಶ್ಚಿಮಾತ್ಯ ತತ್ವಜ್ಞಾನಿಗಳೂ ಗೌತಮ, ಮಹಾವೀರ, ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ಮತ್ತು ಶಕ್ತಿವಿಶಿಷ್ಟಾದ್ವೈತಿಗಳಾದ ವಿಶ್ವಧರ್ಮಿಗಳು ಮೊದಲಾದ ಪೌರ್ವಾತ್ಯ ಆಧ್ಯಾತ್ಮಜ್ಞಾನಿಗಳೂ ಅಹರ್ನಿಶಪರಿಶ್ರಮ ಪಟ್ಟಿದ್ದಾರೆ. ಒಟ್ಟಿನಮೇಲೆ ಶರೀರಸಂಪದಭಿವೃದ್ಧಿಗೆ ಸದಾಚಾರವೇ ಮೂಲವು. ಸದಾಚಾರಕ್ಕೆ ನೀತಿಯೇ ತಳಗಟ್ಟು. ಆದ್ದರಿಂದ ಮನುಷ್ಯನು ಶೀಲಸಂಪನ್ನನಾಗಬೇಕಾದರೆ ದೈಹಿಕ ಆರೋಗ್ಯವೂ ನೈತಿಕ ಬಲವೂ ಪ್ರಬಲ ಸಾಧನಗಳಾಗಿವೆ.

ಶುದ್ಧಾಚರಣೆಯು ಶಾರೀರಿಕ ಬಲಸಂವರ್ಧನೆಗೆ ಪರಿಪೋಷಕವಾಗಿ ಆತ್ಮಿಕಬಲಕ್ಕೆ ಪರಿಪುಷ್ಟಿಯನ್ನು ನೀಡುತ್ತಿದೆ. ಈ ತತ್ವವನ್ನರಿತ ನಮ್ಮ ಪೌರ್ವಾತ್ಯ ತಪೋನಿಧಿಗಳು, ಆರೋಗ್ಯ ನಿಯಮಗಳಿಗೂ ಧರ್ಮಶಾಸ್ತ್ರ ವಿಧಿ-ಕರ್ಮಗಳಿಗೂ ತಳಕು ಹಾಕಿದ್ದಾರೆ. ಇದರಿಂದ ಅಪಾರ ಸುಖ-ಶಾಂತಿ ಸಂಪತ್ತು ಲಭಿಸುವುದು. ಈ ತಾತ್ವಿಕ ವಿವೇಚನೆಯು ಆಧುನಿಕ ಕಾಲದಲ್ಲಿ ಚೆನ್ನಾಗಿ ವಿವೇಚಿಸಲ್ಪಟ್ಟು ಒಂದು ನಿರ್ದಿಷ್ಟ ಸ್ಥಾನವನ್ನು ಹೊಂದುವ ಸಮ

ಯುವನ್ನು ಕಾಯುಕೊಂಡಿದೆ." ಆದರೆ ಪ್ರತಿವ್ಯಕ್ತಿಯೂ ಈ ವಿವೇಚನೆಯತ್ತ ಲಕ್ಷ್ಯಪೂರ್ವಿಸುವುದು ಅಸಾಧ್ಯವಾಗಿದೆ. ಉದರಪೋಷಣೆಯೇ ಮುಖ್ಯ ಸಮಸ್ಯೆಯಾಗಿರುವ ಈ ಕಾಲದಲ್ಲಿ ತಾತ್ವಿಕ ವಿವೇಚನೆಗೆ ಸಮಯವೆಲ್ಲಿ? ಇದೊಂದು ಕರುಣಾಜನಕ ಸ್ಥಿತಿಯಾಗಿದೆ. ಆದ್ದರಿಂದ ಇಂಥ ದೀನ ಸ್ಥಿತಿಯಿಂದ ಸಾಂಸಾರಿಕರನ್ನು ಮುಕ್ತಗೊಳಿಸಲು ಸುವ್ಯವಸ್ಥಿತವಾದ ಸುಲಭ ಮಾರ್ಗದರ್ಶನದ ಆವಶ್ಯಕತೆಯು ಅನಿವಾರ್ಯವಾಗಿದೆ. ಈ ಮಾರ್ಗದರ್ಶನ ಸಾಧನಕ್ಕೆ ಈ ಚಿಕ್ಕ ಹೊತ್ತಿಗೆಯು ಅಲ್ಪಾಂಶದಿಂದಾದರೂ ಪೂರಕವಾಗ ಬಹುದೆಂದು ನಂಬಿಕೆ ಇದೆ. ವಿದ್ವಜ್ಜನರ ಪರಾಮರ್ಶಕ ಬುದ್ಧಿಗೆ–ಕೃಪಾದೃಷ್ಟಿಗೆ–ಇದು ಪಾತ್ರವಾದರೆ ನಮ್ಮ ಪರಿಶ್ರಮಕ್ಕೆ ಸಫಲತೆ ಲಭಿಸುವದರಲ್ಲಿ ಸಂಶಯವಿಲ್ಲ.

ಈ ಪುಸ್ತಕದಲ್ಲಿ ಹತ್ತು ಭಾಗಗಳುಂಟು. ಅವುಗಳಲ್ಲಿ ಪ್ರತಿಯೊಬ್ಬನ ದೈನಿಕ ಆಚರಣೆಯ ರೂಪರೇಷೆಯು ಎಳೆಯಲ್ಪಟ್ಟಿದೆ. ಇದರಿಂದ ಆರೋಗ್ಯದೊಡನೆ ಮುಕ್ತಿಮಾರ್ಗವನ್ನು ಹೇಗೆ ಸಾಧಿಸಬೇಕೆಂಬುದು ತಿಳಿದು ಬರುವಂತಿದೆ ಈ ಅರಿವಿಗಾಗಿಯೇ ಪ್ರಯತ್ನಿಸುವುದು ಈ ಅಲ್ಪಶ್ರಮದ ಮೂಲೋದ್ದೇಶವಾಗಿದೆ.

ಜನಸಾಮಾನ್ಯರಲ್ಲಿ ಆರೋಗ್ಯವಿಷಯದ ಮಹತ್ವವು ದೃಢವಾಗುಳಿಯಲೆಂದು ಮೊದಲಿಗೆ 'ಆರೋಗ್ಯಗೀತೆ' ಎಂಬ ಕವನವನ್ನು ನಿರೂಪಿಸಲಾಗಿದೆ. ಆಯುರ್ವೇದ ಹಾಗೂ ಧರ್ಮಶಾಸ್ತ್ರಗಳ ಅಭಿರುಚಿಯು ಭಾವೀ ಸಂತತಿಯಲ್ಲಿ ಸ್ಥಿರವಾಗುಳಿಯಲು ಅವರ ಮನೋಭೂಮಿಯಲ್ಲಿಯ ಈ ನಿರ್ದುಷ್ಟ—ದೋಷರಹಿತ—ಬೀಜಾಂಕುರಕ್ಕೆ ತಕ್ಕ ಪುಷ್ಟಿಯನ್ನೀಯುವದು ನಮ್ಮ ಆದ್ಯ ಕರ್ತವ್ಯವಾಗಿದೆ. ಧರ್ಮಶಾಸ್ತ್ರ ಆಮ್ರವೃಕ್ಷವನ್ನಾಲಂಗಿಸಿದ ಆರೋಗ್ಯ ಮಲ್ಲಿಕಾಲತೆಯು ಮೋಕ್ಷ ವಸಂತರಾಜನ ಸ್ವಾಗತಕ್ಕೆ ನಿತ್ಯವೂ ಹಸನ್ಮುಖಿಯಾಗಿದ್ದರೆ ಮಾತ್ರ ಆಕೆಯ ಜನ್ಮ ಸಾರ್ಥಕವಾದಂತಾಯಿತು. ಈ ಘನೋದ್ದೇಶ ಸಾಧನೆಯು ಈ ಅಲ್ಪಪರಿಶ್ರಮದಿಂದ ಸಾಧ್ಯವಾಗಬಹುದೇ ?

ಈ ಕೃತಿಯು ಚಿಕ್ಕದಾಗಿದೆ. ಉದ್ದೇಶಮಾತ್ರ ಘನವಾಗಿದೆ. ಚಿಕ್ಕ ಹುಟ್ಟು ದೊಡ್ಡದಾದ ನಾವನ್ನು ಹಿರಿಯ ಹೊಳೆಯಲ್ಲಿಯೂ ಕೂಡ ತನ್ನ ಅಳವಿನಲ್ಲಿಟ್ಟುಕೊಂಡು ಆಚೆ ದಂಡೆಗೆ ಸಾಗಿಸುವಂತೆ ಈ ಅಲ್ಪಕೃತಿಯು ತನ್ನ ಮಹೋದ್ದೇಶ ಸಾಧಿಸುವದೆಂದು ಬಲವಾದ ಆಶೆ ಇದೆ.

ಈ ಅಲ್ಪಕೃತಿಯನ್ನು ವಿದ್ವಜ್ಜನರು ಕೃಪಾದೃಷ್ಟಿಯಿಂದ ಅವಲೋಕಿಸಿ. ದೋಷನಿವಾರಣೆಗಾಗಿ ಮಾರ್ಗದರ್ಶನ ಮಾಡಬೇಕಾಗಿ ಆಶೆ.

ತಮ್ಮ ಅನೇಕ ಕಾರ್ಯಗಳನ್ನು ಬದಿಗಿಟ್ಟು ಮುದ್ದಾದ ಮುದ್ರಣವನ್ನು ಮಾಡಿಕೊಟ್ಟ **ಶ್ರೀ. ಎಮ್. ಬಿ. ವಂಟಮುತ್ತಿ** ಮ್ಯಾನೇಜರ ವಿಶ್ವಭಾರತ ಪ್ರಿಂಟಿಂಗ ಮತ್ತು ಪಬ್ಲಿಶಿಂಗ ಕಂ. ಲಿ., ಬೆಳಗಾವಿ ಅವರಿಗೂ ಲೇಖನಕಾರ್ಯದಲ್ಲಿ ಅನೇಕ ರೀತಿಯಿಂದ ನೆರವಾದ ಹಿತಚಿಂತಕರಿಗೂ ಚಿರಋಣಿಯಾಗಿದ್ದೇವೆ.

ಲೇಖಕರು

ತಾ|| ೨೫-೧೦-೧೯೫೭ } **ಶ್ರೀ ಚೆನ್ನಬಸವಸ್ವಾಮಿ ಕಲ್ಲಮಠ**
ಬೈಲಹೊಂಗಲ. [ಸಂಸ್ಥಾನ ಕಿತ್ತೂರ.]



# ಪರಿವಿಡಿ.

# ಆರೋಗ್ಯ ಗೀತೆ

ಕೇಳಿರೆಲ್ಲರು ದೇಹ ರಕ್ಷಣೆ ಮಾಡಿಕೊಳ್ಳುವ ರೀತಿಯ ॥ ೧ ॥
ಕೇಳಿ ತಾತ್ವಿಕರಾಗಿ ನಡೆದು ಪೊಂದಿರ ಸುಖಶಾಂತಿಯ ॥
ಬೆಳಕು ಹರಿಯುವ ತಾಸು ಮೊದಲೆ ಹಾಸಿಗೆಯು ಬಿಟ್ಟೇಳಿರಿ ॥ ೨ ॥
ತಿಳಿಯ ಹವೆಯೊಳಗಾಡಿ ನಿತ್ಯ ವಿಧಿಗಳನು ಆಚರಿಸಿರಿ ॥
ರಾತ್ರಿ ದೇಹದಿ ಒಟ್ಟುಗೂಡಿದ ಮೂತ್ರ ಮಲಗಳ ನೀಗುತ ॥ ೩ ॥
ಗಾತ್ರವನ್ನು ನೀರಿನಿಂದಲಿ ತೊಳೆದು ನಿರ್ಮಲಗೊಳಿಸುತ ॥
ಬೇವು ಜಾಲಿ ಆಲ ಉತ್ತರಾಣಿ ಕಡ್ಡಿಯ ತನ್ನಿರಿ ॥
ನೀವು ಒಂದನು ಹಲ್ಲಿನಿಂದ ಕಚ್ಚಿ ಕುಂಚವ ಮಾಡಿರಿ ॥ ॥ ೪ ॥
ಮೆತ್ತಗಿರುವ ಭಾಗದಿಂದ ಒಂದೆ ಒಂದೆ ಹಲ್ಲನು ॥
ಒತ್ತಿ ತಿಕ್ಕುತ ಮೇಲು ಕೆಳಗೆ ಮುಗಿಸಿರೆಲ್ಲಾ ಹುಲ್ಲನು ॥ ೫ ॥
ಎಚ್ಚರಾಗಿರಿ ಒಸಡೆಯನ್ನು ಗಾಯಗೊಳಿಸಲು ಬೇಡಿರಿ ॥
ಸ್ವಚ್ಛಮಾಡುತ ಸಂಧಿಗಳೊಳು ದಂತಧಾವನ ಮುಗಿಸಿರಿ ॥ ೬ ॥
ಶುದ್ಧ ನೀರನು ತುಂಬಿಕೊಂಡು ಬಾಯಿ ಲುಕುಲುಕುಮಾಡಿರಿ ॥
ಇದ್ದ ಕಶ್ಮಲವನ್ನು ತಿಕ್ಕಿ ಹೊರಗೆ ನೀವು ಉಗುಳಿರಿ ॥ ೭ ॥
ದೇಹ ಹಗುರವು ಚಿತ್ತಶುದ್ಧಿಯು ಆಚರಣೆಯಿಂ ಮನುಜಗೆ
ಮೋಹಗೊಳ್ಳುವ ಸುಂದರಾಂಗವು ದಷ್ಟಪುಷ್ಟವು ಕಂಣಿಗೆ ॥ ೮ ॥
ತೋರುತಾಗಳೆ ಜೀರ್ಣಶಕ್ತಿಯು ಹೆಚ್ಚುತಿರುವದು ದೇಹದಿ ॥
ಕರಗುತಿರುವದು ದೇಹ ಬೊಜ್ಜವು ಆಚರಣೆಯಿಂ ನಿತ್ಯದಿ ॥ ೯ ॥
ಮಂದಹಾಸದಿ ಮರೆಯದೆಲ್ಲರು ಆಚರಣೆಗಳನೆಸಗಿರಿ ॥
ಮುಂದೆ ಎರಡುಗಳಿಗೆ ಕಳೆಯಲು ಸ್ನಾನವನ್ನಾಚರಿಸಿರಿ ॥ ೧೦ ॥
ತಂಣಗಿರುವ ನೀರಿನಲ್ಲಿ ಮುಣುಗಿ ಸ್ನಾನವಮಾಡಿರಿ ॥
ಅಂಣಗಳಿರಾ ಇದುವೆ ನಿಮಗೆ ನಿತ್ಯ ಹಿತವು ಕೇಳಿರಿ ॥ ೧೧ ॥
ಬಿಸಿಯ ನೀರೊಳು ಸ್ನಾನಮಾಡಲು ಹಿತವು ಅಶಕ್ತ ಜನರಿಗೆ ॥
ಕಸವಿಸಿಯು ತಾಪೋಗಿ ಸಂತಸ ತನವು ಬರುವದು ಅವರಿಗೆ ॥೧೨॥

ದೇಹ ಶಕ್ತಿಯು ಬೆಳಿಸಿ ದೀರ್ಘಾಯುಷ್ಯ ಲಾಭವ ಕೊಡುವದು ||
ಸ್ನೇಹದಿಂದಲಿ ಜಾಡ್ಯವಳಿದು ಶ್ರಮವ ತಾ ಪರಿಹರಿಪುದು || ೧೩ ||
ಸ್ನಾನ ಸಮಯದಿ ದೇಹವೆಲ್ಲವ ತಿಕ್ಕಿ ಕೊಳೆಯ ತೊಳೆವುದು ||
ಸ್ನಾನವಾಗಲು ಶುದ್ಧ ಬಟ್ಟೆಯ ಕಾಲಕನುಗುಣ ಧರಿಪುದು || ೧೪ ||
ನಿರ್ಮಲದ ದೇಹಕ್ಕೆ ಭಸಿತವ ಪೂಸೆ ಕಾಂತಿಯು ದೊರೆವುದು ||
ಚರ್ಮರೋಗವು ಪೋಗಿ ಮನದಿ ಧರ್ಮವು ನೆಲೆಗೊಳ್ಳುವದು || ೧೫ ||
ನಿತ್ಯನೇಮದಿ ಕಂಗಳೆದುರಿಗೆ ಲಿಂಗದೇವನು ಕಾಣಲು ||
ಸತ್ಯದಿಂದಲಿ ದೃಷ್ಟಿಸಿದ್ಧಿಯು ದೊರಕುವದು ಅವ ಮೆಚ್ಚಲು ||೧೬||
ಸಂತಸದಿ ಕರಲಿಂಗ ಪ್ರಾರ್ಥನೆ ಭಕ್ತಿಯಿಂದಲಿ ಮಾಡಿರಿ ||
ಕಂತು ಹರನ ಪ್ರೀತಿಗಾಗಿ ಮನವ ಮುಟ್ಟಿ ದುಡಿಯಿರಿ || ೧೭ ||
ಶುದ್ಧ ಪಾದೋದಕವ ದೇವಗೆ ಕೊಟ್ಟು ತಾನು ಕೊಳ್ಳುವದು ||
ಇದ್ದ ಉಷ್ಣತೆಯಳಿದುಶಾಂತಿಯುದೇಹದೊಳುನೆಲೆಗೊಳ್ಳುವದು||೧೮||
ಅನ್ನ ಭೋಗವ ಪಡೆಯದಾರೂ ಜೀವಿಸರು ನೀವ್ ನೆನೆಯಿರಿ ||
ಅನ್ನ ಮಿತಿಯಿಂದುಂಡು ಜೀವಿಸಿ ಈಶ ತತ್ವವ ತಿಳಿಯಿರಿ || ೧೯ ||
ಈಶನಾಜ್ಞೆಯು ಇರುವುದಿಂತು ಹುಟ್ಟಿದೆಲ್ಲಾ ಜೀವಿಗೆ ||
ಲೇಸು ಮಾತ್ರವು ಕಡಿಮೆಯಾಗದೆ ಅನ್ನ ಸಿಕ್ಕಲಿ ಹೊಟ್ಟೆಗೆ || ೨೦ ||
ಧನಿಕರುಂಡು ಬಿಸುಟುವನ್ನವು ದೀನ ಮನುಜರ ಭಾಗ್ಯವು ||
ತನುವಿನೊಳಗೆ ಸೇರುವಷ್ಟೇ ಕೊಂಡರದುವೆ ಪ್ರಸಾದವು || ೨೧ ||
ಅನ್ನ ಸೇವಿಪುದೊಂದು ವ್ರತವು ಎಂದು ನೀವು ತಿಳಿಯುವುದು ||
ಅನ್ನವನ್ನು ಕಾಲಕಾಲಕೆ ದೇವಗಿತ್ತು ಉಣುವದು || ೨೨ ||
ದೇಹ ರಕ್ಷಣೆ ಮಾಡಲೋಸುಗ ಮಿತದಲನ್ನವಕೊಳ್ಳದೇ ||
ಇಹುದು ಎನ್ನುತ ಹೆಚ್ಚು ತಿನ್ನಲು ಶಾಪಬಾರದೆ ಇರುವುದೇ ||೨೩||
ನಿತ್ಯ ಕಾಯಕವೆಸಗಿ ನೀವು ಧರ್ಮ ಜೀವನಮಾಡಿರಿ ||
ಸತ್ಯ ಶಾಂತಿ ಅಹಿಂಸೆ ಪಾಲನೆಮಾಡಿ ನಿಜಸುಖಪಡೆಯಿರಿ || ೨೪
ಇಂತು ಪೇಳಿದ ಆಚರಣೆಗಳಾರೋಗ್ಯ ಬೀಜಗಳೆನ್ನಿರಿ ||
ಸಂತಸದಿ ತಿಳಿದಾಚರಿಸಿ ನೀವು ಸೌಖ್ಯವನ್ನು ಪಡೆಯಿರಿ || ೨೫

ಶ್ರೀ ಃ

# ಬ್ರಾಹ್ಮೀಮುಹೂರ್ತ (ಬೆಳಗಿನ ಸಮಯ) ದೊಳು ಏಳಬೇಕು.

ಬೆಳಗಿನ ಸಮಯಕ್ಕೆ ಬ್ರಾಹ್ಮೀಮುಹೂರ್ತವೆಂದು ಲೋಕಗ್ರಹಿಕೆ ಯುಂಟು. ಅದು ಯೋಗ್ಯವೇ ಸರಿ—ಯಾಕಂದರೆ ಆಯುರ್ವೇದ ಸಿದ್ಧಾಂತ ವಲ್ಲಿ "ರಾತ್ರೇಶ್ಚಪಶ್ಚಿಮೆಯಾಮೆ ಮುಹೂರ್ತೋಯಸ್ತೃತೀಯಕ:। ಸೋ ಬ್ರಹ್ಮ ಇತಿವಿಖ್ಯಾತೊ ವಿಹಿತ: ಸಂಪ್ರಬೋಧನೆ॥ ಸೂರ್ಯೋದಯಕ್ಕಿಂತ ಪೂರ್ವದ ರಾತ್ರಿಯ ಕಡೆಯ ಯಾಮವು ಅತ್ಯಂತ ಪವಿತ್ರಮಯವಾದು ದರಿಂದ ಅದಕ್ಕೆ ಬ್ರಾಹ್ಮೀ ಮುಹೂರ್ತವೆಂದು ಸ್ಪಷ್ಟವಾಗಿ ಬರೆದಿದ್ದಾರೆ. ಅದರಂತೆ ಜೋತಿರ್ಭಾಂಡಾರವೆಂಬ ಗ್ರಂಥದಲ್ಲಿಯಾದರೂ ಬೆಳಗಿನ ಸಮ ಯಕ್ಕೆ ಬ್ರಾಹ್ಮೀ ಮುಹೂರ್ತವೆಂದು ಉಲ್ಲೇಖವುಂಟು. ಹಗಲು ಅಂದರೆ ಸೂರ್ಯೋದಯದಿಂದ ಸೂರ್ಯಾಸ್ತಮಯದ ವರೆಗೂ ಹದಿನೈದು ಮುಹೂರ್ತಗಳು; ಸೂರ್ಯಾಸ್ತಮಯದಿಂದ ಸೂರ್ಯೋದಯದ ವರೆಗೂ ರಾತ್ರಿಯಲ್ಲಿ ಹದಿನೈದು ಮುಹೂರ್ತಗಳು. ಹಗಲು ಮತ್ತು ರಾತ್ರಿಗಳಲ್ಲಿರ ತಕ್ಕ ಒಟ್ಟು ಇಪ್ಪತ್ತುನಾಲ್ಕು ತಾಸುಗಳಲ್ಲಿ ಹೀಗೆ ಹದಿನೈದು ಹದಿನೈದು ಎಂದು ಎರಡು ಪ್ರಕಾರವಾಗಿ ಯಾವತ್ತೂ ಮುಹೂರ್ತಗಳ ಭಾಗಮಾಡಿ ದ್ದಾರೆ. ಯಾವ ಕಾರ್ಯಕ್ಕಾದರೂ ಅವುಗಳಲ್ಲಿ ಸಾಧಾರಣವಾಗಿ ೧, ೨, ೪, ೧೧, ೧೫, ಈ ಐದು ಮುಹೂರ್ತಗಳು ಅಶುಭಗಳೆಂತಲೂ ಉಳಿದ ೩, ೫, ೬, ೭, ೮, ೯, ೧೦, ೧೩, ೧೪, ಈ ಒಂಭತ್ತು ಮುಹೂರ್ತಗಳು ಶುಭಗಳೆಂತಲೂ ಗೊತ್ತುಮಾಡಿರುವರಲ್ಲದೆ ೧೩, ೧೪ ಮುಹೂರ್ತಗಳು ಎಲ್ಲ ಮುಹೂರ್ತಗಳಿಗಿಂತಲೂ ಸಕಲ ಕಾರ್ಯಗಳಿಗೆ ಅತ್ಯಂತ ಉತ್ತಮ ಅಂದರೆ ಶುಭವಾದವುಗಳೆಂದು ಗ್ರಂಥಕಾರರು ಸ್ಪಷ್ಟವಾಗಿ ಹೇಳಿದ್ದಾರೆ. ಈ ೧೩-೧೪ ಮುಹೂರ್ತಗಳು ಬೆಳಗಿನ ಸಮಯಕ್ಕೆ ಸಂಬಂಧಿಸಿರುವದರಿಂದ ಅವಕ್ಕೆ ಬ್ರಾಹ್ಮೀ ಅಂದರೆ ಉತ್ತಮ ಸಮಯವೆಂದು ಜನರು ತಿಳಿದುಕೊಂಡಿರು ವದುಂಟು.

# ಬ್ರಾಹ್ಮಿಮುಹೂರ್ತ

ಬ್ರಾಹ್ಮೀ ಮುಹೂರ್ತದಲ್ಲಿ (ಅಂದರೆ ದಿನದ ಬೆಳಗಿನ ೧೩-೧೪ ಮುಹೂರ್ತಗಳಲ್ಲಿ) ಲೋಕವೆಲ್ಲ ಕಲಕಲಾಟ ಶಬ್ದವನ್ನು ಬಿಟ್ಟು ಸ್ತಬ್ಧವಾಗಿರುವದು. ಶುದ್ಧವಾದ ವಾತಾವರಣವು ಸಾವಕಾಶವಾಗಿ ಪಸರಿಸುತ್ತಿರುವದು. ಎತ್ತನೋಡಿದತ್ತ ಶಾಂತವಾತಾವರಣವು ಆವರಿಸುತ್ತಿರುವದು. ದೇವತೆಗಳು ಪ್ರಾಣಿಗಳ ಶ್ರಮಾನುಗುಣ್ಯವಾಗಿ ಫಲವನ್ನೀಯಲು ಆಕಾಶದಲ್ಲಿ ಅತ್ತಿತ್ತ ಸಂಚರಿಸುತ್ತಿರುವರೆಂದು ಭಕ್ತಿಭಾವಿಗಳು ಭಾವಿಸುತ್ತಿರುವರು. ಈ ಸಮಯದಲ್ಲಿ ಮಾನವನು ತನ್ನ ನಿದ್ರಾವಸ್ಥೆಯನ್ನು ಬಿಟ್ಟು ಜಾಗ್ರತನಾದರೆ ಸುಶಾಂತವಾತಾವರಣವು ಅವನಿಗೆ ಸಂಪರ್ಕವಾಗುವದರಿಂದ ಆತನ ಮನಸ್ಸು ನಿರ್ಮಲವಾಗಿಯೂ ಶರೀರವು ಆರೋಗ್ಯವುಳ್ಳದ್ದಾಗಿಯೂ ಆಗುವದಲ್ಲದೆ ಅವನು ಯಾವಾಗಲೂ ಸುಖಿಯಾಗುವನು. ಆದ್ದರಿಂದಲೇ ಯೋಗಿಗಳೂ ವಿದ್ಯಾರ್ಥಿ ಮೊದಲಾದವರೂ ಬೆಳಗಿನ ಸಮಯದ ಮಹತ್ವವನ್ನರಿತು ಇತರ ವ್ಯಾಸಂಗಕ್ಕೆ ಮನಸ್ಸನ್ನು ಹರಿಬಿಡದೆ ಆ ಸಮಯದಲ್ಲಿ ಶ್ರಮಬಟ್ಟು ತಮ್ಮ ಇಷ್ಟವನ್ನು ಪ್ರಾಪ್ತಮಾಡಿಕೊಳ್ಳುತ್ತಿರುವರು. ಆ ಸಮಯವು ಎಂಥ ಕಠಿಣವಾದ ವಿಷಯವನ್ನೂ ಸಹ ಬಹುಸುಲಭವಾಗಿ ಸ್ಫುರಣಗೊಳಿಸುವಂಥ ಅಮೌಲ್ಯ ಗುಣದಿಂದ ಕೂಡಿಕೊಂಡಿರುವುದಾಗಿರುವದು. ಯೋಗಿಯು ಯಾವ ವ್ಯಾಯಾಮವನ್ನೂ ಸಹಮಾಡದೆ ಬಲವಾದ ದೇಹವುಳ್ಳವನು (ವಜ್ರಕಾಯಿಯು) ಎಂದು ಹೆಸರು ಪಡೆಯಬೇಕಾದರೆ ಬ್ರಾಹ್ಮೀಮುಹೂರ್ತದ ಶುದ್ಧವಾದ ಹವೆಯನ್ನು ಆತನು ಸಂಪೂರ್ಣವಾಗಿ ಸೇವಿಸುವುದೇ ಇದಕ್ಕೆ ಮೂಲವಾಗಿರುವದು. ಆಂಗ್ಲಭಾಷೆಯಲ್ಲಿಯಾದರೂ "Early to bed and early to rise is the way to be healthy; wealthy and wise."

ಅಂದರೆ ರಾತ್ರಿಯಲ್ಲಿ ಬೇಗ ಮಲಗಿ ಪ್ರಾತಃಕಾಲದಲ್ಲಿ ಬೇಗ ಏಳುವ ಮನುಷ್ಯನು ಆರೋಗ್ಯಶಾಲಿಯೂ, ಭಾಗ್ಯಶಾಲಿಯೂ, ಬುದ್ಧಿಶಾಲಿಯೂ ಆಗುತ್ತಾನೆಂದು ನೀತಿವಚನವು ಪ್ರಸಿದ್ಧವಾಗಿದೆ. ಇದು ಅಲ್ಲದೆ ಚಾಣಕ್ಯ ನೀತಿವಚನವು "ಸೂರ್ಯೋದಯೇಚಾಸ್ತಮಿತೇಶಯಾನಂ | ವಿಮುಂಚತಿ ಶ್ರೀರ್ಯದಿ ಚಕ್ರಪಾಣಿ" ಅಂದರೆ ಸೂರ್ಯೋದಯ ಸೂರ್ಯಾಸ್ತ ಸಮಯಗಳಲ್ಲಿ ಮಲಗಿರುವವನನ್ನು ಲಕ್ಷ್ಮಿಯು ಬಿಟ್ಟು ಹೋಗುವಳೆಂದು ಸಾರುತ್ತದೆ ಅಂದಮೇಲೆ ಪ್ರತಿಯೊಬ್ಬನು ಸುಖಿಯಾಗಿರಬೇಕಾದರೆ ಲಕ್ಷ್ಮಿಯು

ಮುಖ್ಯವಾಗಿ ಬೇಕು, ಅವಳಿಲ್ಲದಿದ್ದರೆ ಸರ್ವರೂ ದುಃಖಿಗಳೇ ಸರಿ. ಇದ ನ್ನರಿತು ಮಾನವನು ಬ್ರಾಹ್ಮೀಮುಹೂರ್ತದಲ್ಲಿ ಅಂದರೆ ಸೂರ್ಯೋದಯ ವಾಗುವವರೊಳಗಾಗಿ ಏಳುವದು ಉತ್ತಮವಾದದ್ದೆಂಬ ಸಂಗತಿಯನ್ನು ನೆನ ಪಿನಲ್ಲಿಟ್ಟುಕೊಳ್ಳಬೇಕು

ರೋಗಿಯು ಮನಸ್ಸು ಯಾವಾಗಲೂ ಚಂಚಲಾತ್ಮಕವಾಗಿರುವದು. ಆತನ ಚಾಂಚಲ್ಯ ಗುಣವು ನಾಶವಾಗದ ಹೊರತು ರೋಗವು ನಾಶಿಯಾಗ ಲಾರದು. ಕಾರಣ ಆತನು ನಿರೋಗಿಯಾಗಬೇಕಾದರೆ ಅವನಿಗೆ ಬೆಳಗಿನ ಸಮಯದ ಶುದ್ಧವಾತಾವರಣದ ಸಂಪರ್ಕವು ಅವಶ್ಯವಾಗಿ ಬೇಕೆಂದರಿತು ಕ್ಷಯ ಮೊದಲಾದ ರೋಗಿಗಳಿಗೆ ದಿನಾಲು ಬ್ರಾಹ್ಮೀಮುಹೂರ್ತದಲ್ಲಿದ್ದು ಶುದ್ಧವಾತಾವರಣದಲ್ಲಿ ಸಂಚರಿಸುವದಕ್ಕಾಗಿ ವೈದ್ಯರು ಕಟ್ಟೆಪ್ಪಣೆಯನ್ನು ಮಾಡುವರು. ಇದೇ ಅಭಿಪ್ರಾಯವನ್ನು ಈ ಕೆಳಗೆ ಕಾಣಿಸಿದ ಮಹನೀಯ ರೆಲ್ಲರು ಬಲಪಡಿಸಿರುವರು.

ಮುಂಬೈ ಸಿಡಿನ್ಹಮ್ ಕಾಲೇಜದ ಪ್ರೊಫೆಸರರಾದ ಆರ್. ಎಮ್. ಜೋಶಿ ಎಮ್. ಎ, ಎಲ್ಎಲ್. ಬಿ. ಯಸ್. ಸಿ. (ಲಂಡನ) ಇವರು "ಮನುಷ್ಯನು ನಿರೋಗಿಯಾಗಬೇಕೆಂಬ ಆಶೆಯಿದ್ದರೆ ಸೂರ್ಯೋದಯ ವಾಗುವಷ್ಟರಲ್ಲಿಯೇ ಎದ್ದು ಮಲಶುದ್ಧಿ ಮುಖಮಾರ್ಜನೆಗಳು ಮುಗಿದು ಜಳಕವಾಗಿರಲಿಕ್ಕೆಬೇಕೆಂಬ ನೇಮವನ್ನು ಅವನು ಅವಶ್ಯವಾಗಿ ಹಿಡಿಯಲೇ ಬೇಕು." ಎಂದು ಸ್ಪಷ್ಟವಾಗಿ ಹೇಳಿದ್ದಾರೆ ಮಲಶುದ್ಧಿ-ಮುಖಮಾರ್ಜನ- ಸ್ನಾನಾದಿಗಳು ಸೂರ್ಯೋದಯದ ಪೂರ್ವದಲ್ಲಿಯೇ ವಾಗಿಯಬೇಕಾದರೆ ಅಂದರೆ ಬೆಳಗಿನ ೧೩-೧೪ ಬ್ರಾಹ್ಮೀಮುಹೂರ್ತದಲ್ಲಿ ಆತನು ನಿಶ್ಚಯವಾಗಿ ತನ್ನ ನಿದ್ರಾವಸ್ಥೆಯನ್ನು ಬಿಟ್ಟು ಜಾಗ್ರತನಾಗಲೇಬೇಕೆಂಬ ಉದ್ದೇಶವು.

"ಮನುಷ್ಯನು ರೋಗರಹಿತನೂ ಚಟಪಟಿಕೆಯುಳ್ಳವನೂ ಆನಂದ ಮನಸ್ಕನೂ ಆಗಬೇಕೆಂದಿದ್ದರೆ ಅತಿ ಮಹತ್ತರವಾದ ಬೆಳಗಿನ ಸಮಯವನ್ನು ಒಳ್ಳೇ ಜಾಗರೂಕತೆಯಿಂದ ಕಾಯ್ದುಕೊಳ್ಳಬೇಕೆಂದು" ಆರೋಗ್ಯಶಾಸ್ತ್ರ ವೆಂಬ ಗ್ರಂಥಕರ್ತರಾದ ಜಿ. ಯಮ್. ದೇಶಮುಖ ಬಿ. ಎ, ಬಿ. ಎಸ್. ಸಿ. ಯನ್. ಟಿ. ಸಿ. ಡಿ. ಎಂಬುವವರು ಹೇಳಿದ್ದಾರೆ.

# ಬ್ರಾಹ್ಮಿ ಮುಹೂರ್ತ

"ಮೂರು ವರ್ಷದ ಬುದ್ಧಿ ನೂರು ವರ್ಷಗಳ ತನಕವೆಂಬಂತೆ ಮುಂಜಾವಿನ ಬುದ್ಧಿ ಸಂಜೆಯುವರೆಗೂ ಸಹಜನಾಗಿರುವದೆಂದು" ಡಾಕ್ಟರ ಜೆ. ಯಮ್. ಕನಿಂಗ್ಹಮ್ ಎಮ್. ಡಿ. ಎಂಬುವರು ಹೇಳಿದ್ದಾರೆ.

ಇಂಗ್ಲೀಷ ಗ್ರಂಥಕರ್ತರಾದ ಲಾರ್ಡ ಎವ್ಹಬರಿ ಸಾಹೇಬರವರ ಪ್ಲೆಝರ್ಸ ಆಫ್ ಲಾಯಿಫ್ ಎಂಬ ಗ್ರಂಥಾಧಾರದಿಂದ ಸಂಸಾರ ಸುಖವೆಂಬ ಕನ್ನಡ ಗ್ರಂಥಕಾರರಾದ ಎಚ್. ಜಿ. ದೇಶಪಾಂಡೆ ಬಿ. ಎ. ಅ. ಡೆಪ್ಯುಟಿ ಎ. ಇನಸ್ಪೆಕ್ಟರ ಬೆಳಗಾವ ಇವರು ತಮ್ಮ ಗ್ರಂಥದಲ್ಲಿ "ಕಾಯಿ, ತಂತಿ, ಕಿವಿ ಮೊದಲಾದವುಗಳನ್ನು ಸರಿಯಾಗಿ ಕೂಡಿಸಿ ತಂಬೂರಿಯನ್ನು ಮಾಡುವಂತೆ ಅಸ್ಥಿ ಮಜ್ಜಾ ಸ್ನಾಯು, ಮಿದುಳು, ತ್ವಚೆ ಮೊದಲಾದ ಅನೇಕ ವಸ್ತುಗಳಿಂದ ಪರಮೇಶ್ವರನು ಈ ವಿಚಿತ್ರವಾದ ಶರೀರವನ್ನು ಮಾಡಿರುವನು. ಇವನ್ನು ಎಷ್ಟು ವಿಚಾರಿಸಿದರೂ ಆತನ ವಿಚಿತ್ರ ಕೃತಿಯು ತೀರವೇ ತೋರುವದಿಲ್ಲ. ಇಂಥ ವಿಚಿತ್ರವಾದ ದೇಹವನ್ನು ಪರಮಾತ್ಮನು ಯಾಕೆ ಕೊಟ್ಟಿರುವನೆಂಬ ಪ್ರಶ್ನೆವು ಎಲ್ಲರ ಮುಂದೆ ಬಂದು ನಿಲ್ಲುವದು. ಆದರೆ ಸರ್ವರೂ ಈ ದೇಹವು ಒಂದು ಮಹತ್ಫಲದ ಸಾಧನವಾಗಿರುವದೆಂದರಿದು ಮಂಗನ ಕೈಯೊಳಗಿನ ಮಾಣಿಕದಂತೆ ಇದನ್ನು ವ್ಯರ್ಥಗೊಳಿಸದೆ ಅಂದರೆ ಅವ್ಯವಹಾರಗಳಿಂದ ಹಾಳುಮಾಡಿಕೊಳ್ಳದೆ ಇದಕ್ಕೆ ಬೇಕಾಗುವ ಬೆಳಗು ಮುಂಜಾವಿನ (ಬ್ರಾಹ್ಮೀ ಮುಹೂರ್ತದ) ಶುದ್ಧವಾದ ಪ್ರಶಾಂತವಾತಾವರಣವನ್ನೂ ಆಹಾರದ ಮಿತವ್ಯತೆಯನ್ನೂ ನಿಯಮಿತ ಶ್ರಮವನ್ನೂ ಬಿಡದಲೇ ಒದಗಿಸಿಕೊಡಬೇಕೆಂದು ಉಲ್ಲೇಖಿಸಿದ್ದಾರೆ.

ಹತ್ತೊಂಭತ್ತನೆಯ ಶತಮಾನದಲ್ಲಿ ಆಗಿಹೋದ ವಡ್ಸವರ್ಥನೆಂಬ ಪ್ರಸಿದ್ಧ ಆಂಗ್ಲ ಕವಿಯು ತೊಂಭತ್ತು ವರ್ಷದ ಮುದುಕನಾದರೂ ಇಪ್ಪತ್ತು ವರ್ಷದ ಯುವಕನಂತೆ ತೇಜಸ್ವಿಯಾಗಿದ್ದನಂತೆ. ಆತನನ್ನು ದೇಹದ ಬಗ್ಗೆ ಯಾರಾದರೂ ವಿಚಾರಿಸಿದರೆ ಅವನು "ಶುದ್ಧವಾದ ಬೆಳಗಿನ ಹವೆಯಲ್ಲಿ ಸಂಚರಿಸುವ ಮನುಷ್ಯನು ವೈದ್ಯರ ಮುಖವನ್ನು ಎಂದೂ ಕಾಣನು." ಎಂಬ ಗಂಭೀರದ ಅನುಭವ ನುಡಿಯನ್ನು ಆಡುತ್ತಿದ್ದನಂತೆ.

ವೈದ್ಯ ಶಿರೋಮಣಿಯಾದ ವಾಗ್ಭಟನು "ಬ್ರಾಹ್ಮೀಮುಹೂರ್ತೇ ಜೋತ್ತಿಷ್ಠೇತ್ ಸ್ವಸ್ಥೋರಕ್ಷಾರ್ಥಮಾಯುಷಃ" ಎಂದು ಬೆಳಗಿನ ಸಮಯದ ಮಹತ್ವವನ್ನು ತನ್ನ ಗ್ರಂಥದಲ್ಲಿ ವರ್ಣಿಸಿದ್ದಾನೆ.

# ಬ್ರಾಹ್ಮಿ ಮುಹೂರ್ತ

ಒಟ್ಟಿನ ಮೇಲೆ ಎಲ್ಲ ಮಹಾಶಯರೂ ಬೆಳಗಿನ ಸಮಯವು ಆರೋಗ್ಯವನ್ನುಂಟುಮಾಡುವಂಥಾದ್ದೂ ಮಾನವನ ಚಿತ್ತವೃತ್ತಿಯನ್ನು ಪರಿಶುದ್ಧಗೊಳಿಸುವಂಥಾದ್ದೂ ಆಗಿರುವದೆಂದು ತಮ್ಮ ಅನುಭವದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಕಾರಣ ಮನುಷ್ಯನು ಸೂರ್ಯೋದಯಕ್ಕಿಂತ ಮೊದಲೇ ಎದ್ದು ಜನಸಂಚಾರವಿಲ್ಲದ ಶುದ್ಧ ವಾಯುವಿನ ಪ್ರದೇಶದಲ್ಲಿ ಒಂದು ತಾಸು ಸಮಯದ ವರೆಗೂ ಸಂಚರಿಸತಕ್ಕದ್ದು. ಆ ಕಾಲದಲ್ಲಿಯ (ಬೆಳಗಿನ) ನಿರ್ಮಲವಾದ ವಾಯುವಿನ ಸಂಪರ್ಕವು ಆತನಿಗೆ ಆಗಿ ಶರೀರದ ಎಲ್ಲ ಇಂದ್ರಿಯಗಳಿಗೆ ಸ್ಫೂರ್ತಿಯುಂಟಾಗುವದು. ಮನಸ್ಸು ಶಾಂತಮಯವಾಗುವದು. ಶರೀರದಲ್ಲಿ ಯಾವ ಕಾರ್ಯವನ್ನಾದರೂ ಆಯಾಸವಿಲ್ಲದೆ ಮಾಡಲು ಬೇಕಾಗುವ ಶಕ್ತಿಯುತ್ಪನ್ನವಾಗುವದು. ಹೀಗಾಗುವದರಿಂದ ಜೀವನದ ಕಾರ್ಯಗಳೆಲ್ಲವೂ ಸುಲಲಿತವಾಗಿ ಸಾಗುವವು. ಬೆಳಗು ಮುಂಜಾವಿನಲ್ಲಿ ಸಂಚರಿಸುವದರಿಂದ ಶುದ್ಧವಾಯುವಿನ ಸೇವನೆಯೊಂದಿಗೆ ಎಲ್ಲ ಅವಯವಗಳಿಗೂ ಸಾಕಷ್ಟು ವ್ಯಾಯಾಮ ದೊರೆಯುವದು. ಆದ್ದರಿಂದ ಆರೋಗ್ಯಾಭಿಲಾಷಿಗಳು ಬ್ರಾಹ್ಮೀಮುಹೂರ್ತದಲ್ಲಿ ಶುದ್ಧ ಸ್ಥಳದಲ್ಲಿ ಸಂಚರಿಸುವ ಅಭ್ಯಾಸವನ್ನಿಟ್ಟುಕೊಳ್ಳುವುದು ಉತ್ತಮವಾದದ್ದು. ಈ ಎಲ್ಲ ಮಹತ್ವವನ್ನರಿತು ವಿಶ್ವಧರ್ಮಿಗಳು ಆರೋಗ್ಯವನ್ನೂ ಆನಂದವನ್ನೂ ಸಹಜವಾಗಿ ಹೊಂದಲೆಂದು ಆರೋಗ್ಯಕ್ಕೆ ಅವಶ್ಯವಾಗಿ ಬೇಕಾಗುವ ಎಲ್ಲ ಸಾಧನೆಗಳನ್ನು ನಿತ್ಯಾಚರಣೆಗಳನ್ನಾಗಿ ಗೊತ್ತುಪಡಿಸಿದ್ದಾರೆ. ಈ ಸಾಧನೆಗಳಲ್ಲಿ ಬ್ರಾಹ್ಮೀಮುಹೂರ್ತದಲ್ಲಿ ಅಂದರೆ ಬೆಳಗು ಮುಂಜಾವಿನಲ್ಲಿ ಮಾನವನು ತಪ್ಪದೇ ಏಳಬೇಕೆಂಬುವದು ಧರ್ಮಾಚರಣೆಯ ಮೊದಲನೆಯ ನೇಮವಾಗಿರುವದು.

# ಮಲವಿಸರ್ಜನೆಯು



ಮನೆಯು ಸ್ವಚ್ಛವಾಗಿ ಶುದ್ಧಹವೆಯುಳ್ಳದ್ದಾಗಿದ್ದರೆ ಅದರೊಳಗೆ ವಾಸಿಸುವ ಕುಟುಂಬಿಗರು ಆರೋಗ್ಯಯುಕ್ತರಾಗಿ ಸುಖದಿಂದ ಕಾಲಹರಣ ಮಾಡುವರು. ಆದರೆ ಅದೇಮನೆಯು ತುಂಬಾ ಹೊಲಸಿನಿಂದ ಕೂಡಿದ್ದಾದರೆ ಆ ಕುಟುಂಬಿಗರು ರೋಗಿಗಳಾಗಿ ಯಾವಾಗಲೂ ದುಃಖದಿಂದ ಬಳಲುವರೆಂಬುವದು ಎಲ್ಲರ ಅನುಭವಕ್ಕೆ ಬಂದ ಸಂಗತಿಯಾಗಿದೆ. ಮಾನವನು ನಿರೋಗಿಯಾಗಿ ಸುಖದಿಂದರಬೇಕೆಂಬ ಇಚ್ಛೆಯುಳ್ಳವನಾದರೆ ಅವನು ವಾಸಿಸುವ ಗೃಹವನ್ನು ಯಾವಾಗಲೂ ಸ್ವಚ್ಛವಾಗಿರಿಸಬೇಕೆಂಬುವದನ್ನು ಪೂರಾ ಲಕ್ಷದಲ್ಲಿಡತಕ್ಕದ್ದು. ಇಲ್ಲವಾದರೆ ಆ ಮನೆಯೊಳಗೆ ದಿನದಿನಕ್ಕೆ ಹೊಲಸುಕೂಡಬಿದ್ದು ಅದರಿಂದ ಅನೇಕ ತರಹದ ಅಪಾಯಕಾರಕ ಕ್ರಿಮಿಗಳುತ್ಪನ್ನವಾಗಿ ಅವನ ಆರೋಗ್ಯಕ್ಕೆ ಹ್ಯಾಗೆ ಬಾಧೆ ಬರುವದೋ ಅದರಂತೆ ಶರೀರವೆಂಬ ಗೃಹವನ್ನೂಕೂಡ ಯಾವಾಗಲೂ ಸ್ವಚ್ಛವಾಗಿರಿಸತಕ್ಕದ್ದು ಮನುಷ್ಯನ ಮುಖ್ಯ ಕರ್ತವ್ಯವಾಗಿದೆ. "ಅತ್ಯಂತ ಮಲಿನೋದೇಹೋನವಛಿದ್ರಸಮನ್ವಿತಃ । ಸ್ರವತ್ಯೇವದಿವಾರಾತ್ರೌ" ಎಂಬಂತೆ ದೇಹದಿಂದ ಹಗಲಿರುಳು ಒಂದೇ ಸವನೆ ಹೊಲಸು ಹೊರಬೀಳುತ್ತಿರುವದು. ಅದನ್ನು ಮೇಲಿಂದ ಮೇಲೆ ಸ್ವಚ್ಛಮಾಡದೆ ಬಿಟ್ಟರೆ ಅದರಿಂದ ಅಪಾಯವು ತಪ್ಪದೇ ತಟ್ಟುವದು. ಮಲಮೂತ್ರಗಳು ಶರೀರದೊಳಗುಂಟಾಗತಕ್ಕ ಎಲ್ಲ ಹೊಲಸುಗಳಿಗಿಂತಲೂ ಬಹಳ ದುರ್ಗಂಧಗಳು. ಅವುಗಳನ್ನು ನಿಯಮಿತತನದಿಂದ ಶರೀರದಿಂದ ಹೊರದೂಡದಿದ್ದರೆ ಅಪಾಯವಾಗುವದೆಂತಲ್ಲ, ಅವುಗಳ ವಿಸರ್ಜನೆಯ ಕಾಲಕ್ಕೆ ಉಂಟಾಗತಕ್ಕ ಹೊಲಸು ವಾಯುವಿನ ಸಂಪರ್ಕದಿಂದಾದರೂ ಅಪಾಯ ಸಂಭವಿಸುವದುಂಟು. ಇದನ್ನರಿತು ಮಾನವನ ಆರೋಗ್ಯತೆಗೆ ಬಾಧೆತಟ್ಟದಂತೆ ಆಚಾರ ಗ್ರಂಥಕಾರರು ವಿಶೇಷಾರ್ಥವೆಂಬ ಗ್ರಂಥದಲ್ಲಿ "ಉದನ್ಮುಖಸ್ತುಮಧ್ಯಾಹ್ನೆ ನಿಶಾಯಾಂ ದಕ್ಷಿಣೆ ಮುಖಃ" ಎಂತಲೂ ಕ್ರಿಯಾಸಾರವೆಂಬ ಗ್ರಂಥದಲ್ಲಿ "ವಿಣ್ಮೂತ್ರೋತ್ಸರ್ಜನಂ-ಕುರ್ಯಾತ್ ಗತ್ವಾದೇಶಂಯಥೋಚಿತಂ । ಉದಿನ್ಮುಖೋಹಸ್ಸಂಧ್ಯೋಸ್ತುರಜನ್ಯಾಂದಕ್ಷಿಣೆಮುಖಃ" ಅಂದರೆ ಹಗಲು ಉತ್ತರಮುಖವಾಗಿಯೂ

ರಾತ್ರಿಯಲ್ಲಿ ದಕ್ಷಿಣಮುಖವಾಗಿಯೂ ಉಭಯ ಸಂಧ್ಯಾಸಮಯಗಳಲ್ಲಿ ಉತ್ತರ ದಿಕ್ಕಿಗೆ ಮುಖವಾಗಿಯೂ ಕುಳಿತು ಮಲಮೂತ್ರಗಳನ್ನು ವಿಸರ್ಜನೆ ಮಾಡತಕ್ಕದ್ದೆಂದು ಬರೆದಿರುವರು. ಈ ಆಚಾರ ಗ್ರಂಥಗಳಲ್ಲಿ ಈ ಪ್ರಕಾರವಾಗಿ ಆಚಾರನಿಷ್ಠರು ಯಾಕೆ ಉಲ್ಲೇಖಿಸಿದ್ದಾರೆ ಮತ್ತು ವಿಧಿಸಿದ ಈ ನೇಮಕ್ಕೂ ಆರೋಗ್ಯಕ್ಕೂ ಏನು ಸಂಬಂಧ ಉಂಟೆಂಬುವದು ಈ ಕೆಳಗೆ ಬರೆದ ಸಂಗತಿಯಿಂದ ತಿಳಿದುಬರುವದು.

ಕೆಲವು ಗಾಳಿಗಳು ವರ್ಷಪೂರ್ತಿಯಾಗಿ ಒಂದೇ ಸಮನೆ ಒಂದೇ ದಿಕ್ಕಿಗೆ ಬೀಸುತ್ತಿರುತ್ತವೆ. ಕೆಲವು ಗಾಳಿಗಳು ವರ್ಷಾರ್ಧದಲ್ಲಿ ವಿರುದ್ಧ ದಿಕ್ಕಿನಿಂದ ಬೀಸುತ್ತಿರುತ್ತವೆ. ಮತ್ತೆ ಕೆಲವು ಅನಿಯಮಿತವಾಗಿ ಬೀಸುತ್ತಿರುತ್ತವೆ. ಹೀಗೆ ಭೂಮಿಯಮೇಲೆ ಮೂರು ಪ್ರಕಾರಗಳಾಗಿ ಗಾಳಿಗಳು ಬೀಸುತ್ತಿರುತ್ತವೆಂದು ಭೂಗೋಲಕಾರರು ಬರೆದಿರುವರು. ಅವುಗಳಿಗೆ ನಾವು-ಪೂರ್ವ ಪಶ್ಚಿಮ ಗಾಳಿಗಳೆಂದೂ ಮನ್ಸೂನಗಾಳಿಗಳೆಂದೂ ಅನ್ನುವದುಂಟು ಪೂರ್ವ ಪಶ್ಚಿಮವಾಗಿ ಬೀಸುವ ಮತ್ತು ಬಿರುಗಾಳಿಗಳ ಜ್ಞಾನವು ಸರ್ವರಿಗೂ ಇರುವದು. ಆದರೆ ಮನ್ಸೂನ ಅಂದರೆ ಈಶಾನ್ಯ ಮತ್ತು ನೈಋತ್ಯಗಳಿಂದ ಬೀಸುವ ಗಾಳಿಗಳ ನಿಜವಾದ ಅನುಭವವು ಯಾವತ್ತರಿಗೂ ಇರುವದಿಲ್ಲ. ಇವುಗಳ ವಿಷಯವಾಗಿ ತಿಳಿದುಕೊಳ್ಳುವದು ಪ್ರತಿಯೊಬ್ಬ ಮಾನವನ ಆದ್ಯಕರ್ತವ್ಯವಾಗಿದೆ. ಈ ಮನ್ಸೂನ ಗಾಳಿಗಳ ಸಂಬಂಧವಾಗಿ ಅಮೇರಿಕದ ಪ್ರಸಿದ್ಧ ವಾಯುಶಾಸ್ತ್ರಜ್ಞನಾದ ಪೇರಲನೆಂಬುವವನು ಈ ಕೆಳಗೆ ಬರೆದ ಅನುಭವವನ್ನು ಕಂಡುಹಿಡಿದಿದ್ದಾನೆ. ಅದಕ್ಕೆ ಪೇರಲನ ನೇಮವೆಂದು ಹೆಸರುಂಟು.

"ವಿಷುವವೃತ್ತದ ಕಡೆಗೆ ಹೋಗುವ ಗಾಳಿಗಳು ಪಶ್ಚಿಮಕ್ಕೆ ಸಾಗುವವೆಂತಲೂ ಧ್ರುವಗಳ ಕಡೆಗೆ ಹೋಗುವ ಗಾಳಿಗಳು ಪೂರ್ವಕ್ಕೆ ಸಾಗುವವೆಂತಲೂ ಅವನು ಅಭಿಪ್ರಾಯಪಟ್ಟಿರುವನು. ಇದರಂತೆಯೇ ಆರೋಗ್ಯ ವಿಜ್ಞಾನ ಶಾಸ್ತ್ರಕಾರರೂ ಕೂಡ ಉಷ್ಣತೆಯಲ್ಲಿ ಅಂದರೆ ಹಗಲು ಗಾಳಿಗಳು ಪೂರ್ವ ಮತ್ತು ಈಶ್ಯಾನ್ಯದಿಕ್ಕುಗಳಿಂದಲೂ ರಾತ್ರಿಯಲ್ಲಿ ಪಶ್ಚಿಮ ಮತ್ತು ನೈಋತ್ಯದಿಕ್ಕುಗಳಿಂದಲೂ ಒತ್ತರದಿಂದ ಬೀಸುತ್ತಿರುವವೆಂದು ಸ್ಪಷ್ಟವಾಗಿ ಬರೆದಿದ್ದಾರೆ. ಅಂದಮೇಲೆ ಮನುಷ್ಯನು ಆರೋಗ್ಯವನ್ನು ಕಾಯ್ದುಕೊಳ್ಳಬೇಕಾದರೆ ಮಲಮೂತ್ರಗಳ ಮೇಲಿಂದ ಹಾಯ್ದು ಬರುವಂಥ ದುರ್ಗಂಧ

ಗಾಳಿಯು ಉಸುರಿನಮೂಲಕ ಶ್ವಾಸಕೋಶದಲ್ಲಿ ಸೇರದಂತೆ ಬಹು ಎಚ್ಚರ ದಿಂದ ಗಾಳಿಗಳ ಬೀಸುವ ದಿಕ್ಕುಗಳನ್ನರಿತು ಮಲಮೂತ್ರಗಳನ್ನು ತ್ಯಜಿಸ ಬೇಕು. ಹಾಗಿಲ್ಲದೆ ದುರ್ಗಂಧವಾಯುವಿನ ಗತಿಯು ಬೆನ್ನು ಮೇಲಿಂದ ಹಾಯ್ದು ಬರುವಂಥ ದಿಕ್ಕುಗಳಿಗೆ ಅಂದರೆ ಹಗಲು ದಕ್ಷಿಣಮುಖವಾಗಿಯೂ ರಾತ್ರಿಸಮಯದಲ್ಲಿ ಉತ್ತರಮುಖವಾಗಿಯೂ ಕುಳಿತು ಮಲವಿಸರ್ಜನೆ ಮಾಡಿದ್ದಾದರೆ ಅಪಾಯವು ತಪ್ಪದೆ ತಟ್ಟುವದುಂಟು. ಯಾಕಂದರೆ ಆ ಕಾಲಗಳಲ್ಲಿ ಗಾಳಿಗಳು ಮಲವಿಸರ್ಜನೆಗಾಗಿ ಕುಳಿತವನ ಬೆನ್ನುಮೇಲಿಂದ ಹಾಯ್ದು ಬರುವವು. ಆ ಹೊಲಸುವಾಯುವು ಅವನ ಉಸುರಿನ ಮೂಲಕ ಶ್ವಾಸಕೋಶದೊಳಗೆ ಸೇರುವದು. ಮಾನವನ ಜೀವರಕ್ಷಣೆಗೆ ಶುದ್ಧವಾದ ಆಹಾರ ನೀರುಗಳು ಹೇಗೆ ಅತ್ಯವಶ್ಯಗಳೋ ಹಾಗೆಯೇ ಪರಿಶುದ್ಧವಾದ ಹವೆಯೂ ಅವಶ್ಯವಾಗಿರುವದು. ಮಾನವನು ಜನ್ಮಾರಭ್ಯ ದಿಂದ ಮರಣ ಪರಿಯಂತವಾಗಿಯೂ ಅರಕ್ಷಣವಾದರೂ ಬಿಡುವಿಲ್ಲದೆ ಶ್ವಾಸೋಚ್ಛ್ವಾಸ ಕ್ರಿಯೆಯಿಂದ ಕೂಡಿದವನಾಗಿದ್ದಾನೆ. ಯಾವಕ್ಷಣದಲ್ಲಿ ಈ ಕ್ರಿಯೆಯು ನಿಂತು ಹೋಗುವದೋ ಆದೇಕ್ಷಣದಲ್ಲಿಯೇ ಅವನ ಇಹಲೋಕ ಯಾತ್ರೆಯೂ ಸಹ ನಿಂತುಹೋಗುವದು. ಒಂದುದಿನಕ್ಕೆ ಮನುಷ್ಯನು ಏನಿಲ್ಲೆಂದರೂ ಎರಡುಮೂರು ಸಾರೆ ಆಹಾರವನ್ನು ಐದು ಆರು ಸಾರೆ ನೀರನ್ನು ಸೇವಿಸುತ್ತಿದ್ದರೆ ಹವೆಯನ್ನು ಒಂದು ನಿಮಿಷದಲ್ಲಿ ಹದಿನೈದು ಇಪ್ಪತ್ತು ಸಾರೆ ಉಸುರಾಡಿಸಬೇಕಾಗುವದು. ಇದರಮೇಲಿಂದ ಮನುಷ್ಯನಿಗೆ ಹವೆಯ ಅವಶ್ಯಕತೆಯು ಎಷ್ಟರಮಟ್ಟಿಗೆ ಇರುವದೆಂಬುವದು ಅನುಭವದಿಂದ ಪ್ರತಿಯೊಬ್ಬನಿಗೂ ತಿಳಿದುಬರುವ ಸಂಗತಿಯಾಗಿದೆ. ಮನುಷ್ಯನು ಹವೆಯನ್ನು ಒಳಗೆ ಎಳೆದು ಕೊಳ್ಳುವಾಗ್ಗೆ ಹೊರಗಿನ ಶುದ್ಧ ಹವೆಯು ಶರೀರದಲ್ಲಿ ಪ್ರವೇಶಿಸಿ ರಕ್ತನಾಳಗಳನ್ನು ವ್ಯಾಪಿಸಿ ರಕ್ತವನ್ನು ನಿರ್ಮಲಗೊಳಿಸುತ್ತದೆ. ಹವೆಯನ್ನು ಹೊರಗೆ ಬಿಡುವಾಗ್ಗೆ ಶರೀರದೊಳಗಿನ ಹೊಲಸು ಹವೆಯು ಹೊರಗೆ ಹೊರಡುತ್ತದೆ. ಈ ಹೊರಗೆ ಹೋಗುವ ದೂಷಿತಹವೆಯು ದೇಹದೊಳಗೆ ಸೇರದಂತೆ ಎಚ್ಚರದಿಂದಿರಬೇಕೆಂಬ ಬಗ್ಗೆ ಎಲ್ಲ ಆರೋಗ್ಯಕಾರರ ಅಭಿಪ್ರಾಯ ಉಂಟಷ್ಟೆ? ಅಂದಮೇಲೆ ದೇಹದೊ ಳಗಿಂದ ಹೊರಡುವ ಮಲಿನಹವೆಗಿಂತ ಮಲಮೂತ್ರಗಳ ಹವೆಯು ಅತ್ಯಂತ

ದೂಷಿತವಾದದ್ದು. ಇಂಥ ದುರ್ಗಂಧವಾಯುವನ್ನು ಶ್ವಾಶಕೋಶದೊಳಗೆ ಸೇರದಂತೆ ಬಹು ಜಾಗರೂಕವಾಗಿರುವದು ಒಳಿತು.

ಶುದ್ಧಹವೆಯೇ ಪ್ರಾಣಿಯ ಆರೋಗ್ಯತೆಗೆ ಬಲವಾದ ಸಾಧನವು. ದೂಷಿತಹವೆಯೇ ರೋಗದ ಮೂಲವು. ದುರ್ಗಂಧದಿಂದ ಕೂಡಿದ ಹವೆಯೇ ದೂಷಿತ ಹವೆಯು. ದೂಷಿತ ಹವೆಯಲ್ಲಿ ಅನೇಕ ತರಹದ ಅಪಾಯಕಾರಕ ಕ್ರಿಮಿಗಳು ಜಾಸ್ತಿಯಾಗಲೂ ಕೂಡಿಕೊಂಡಿರುವವು. ಇಂಥ ಹವೆಯಲ್ಲಿ ಮನುಷ್ಯನು ಶ್ವಾಸೋಚ್ಛ್ವಾಸವನ್ನು ಮಾಡಿದ್ದಾದರೆ ಆತನ ಉಸುರಿನ ಮೂಲಕ ಕ್ರಿಮಿಗಳು ದೇಹದೊಳಗೆ ಸೇರಿ ಕುತ್ತಿಗೆ ಬಾಯೋಣ-ಬ್ರಾಂಕಯಟೀಸ್-ನ್ಯೂಮೋನಿಯ-ಇನ್‌ಫ್ಲೂಯಂಝಾ ಮೊದಲಾದ ಭಯಂಕರ ರೋಗಗಳು ಸಹಜವಾಗಿ ಹುಟ್ಟುವವು. ಮಲಿನಜನ್ಯಕ್ರಿಮಿಗಳಿಂದಲೇ ಈ ರೋಗಗಳ ಉತ್ಪತ್ತಿಯು. ಮಲಮೂತ್ರಮೊದಲಾದ ಹೊಲಸು ಸ್ಥಳಗಳೇ ಈ ಕ್ರಿಮಿಗಳ ಜನ್ಮಭೂಮಿಯು. ಈ ಕ್ರಿಮಿಯುಕ್ತವಾದ ವಾಯುವು ಬೆನ್ನು ಮೇಲಿಂದ ಹಾಯ್ದು ಮುಖದಮುಂದೆ ಬರಲು ಅದು ಶ್ವಾಸಮೂಲಕವಾಗಿ ಪುಪ್ಪುಸಗಳಲ್ಲಿ ಸೇರುವದರಿಂದ ಆಮೂಲಕ ಕ್ರಿಮಿಗಳು ದೇಹದ ಒಳಸೇರಲು ತಪ್ಪದೇ ಅಪಾಯ ಸಂಭವಿಸುವದು. ಆದ್ದರಿಂದಲೇ ವೀರಶೈವಾಚಾರ ಗ್ರಂಥದಲ್ಲಿ "ನಿಷ್ಠೀವೇನ್ನವದೇದ್ವಾಕ್ಯಂವಸ್ತ್ರೇಣಾವೃತಮಸ್ತಕಂ।ಮೌನೀನಾಸಾಗ್ರದೃಗ್ಭ್ಯಕ್ತ್ವೋಮಲಮೂತ್ರಂವಿಸರ್ಜಯೇತ್" ಅಂದರೆ ವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡು ಅನ್ಯರಕೂಡ ಮಾತನಾಡದೆ ಮೇಲುದೃಷ್ಟಿಯುಳ್ಳವನಾಗಿ ಮಲಮೂತ್ರಗಳನ್ನು ತ್ಯಜಿಸಬೇಕೆಂದು ಹೇಳಿದ್ದಾರೆ. ಮುಖವನ್ನು ಮುಚ್ಚಿಕೊಂಡು ಮೌನಿಯಾಗುವದರಿಂದ ಹೊಲಸು ಹವೆಯು ಶ್ವಾಸಮೂಲಕ ಒಳಗೆ ಸೇರಲು ಅನುಕೂಲವಾಗುವದಿಲ್ಲ. ಅನ್ಯಪ್ರಾಣಿಗಳ ಮಲಮೂತ್ರಕ್ಕಿಂತಲೂ ಮನುಷ್ಯನ ಮಲಮೂತ್ರಗಳು ಅತ್ಯಂತ ವಿಷಕಾರಕಗಳು. ಇವುಗಳಿಂದ ತೀವ್ರವಾಗಿ ಅಪಾಯವಾಗುವದುಂಟು. ಇದನ್ನರಿತು ಚೀನದೇಶದೊಳಗೆ ಮಲಮೂತ್ರಗಳ ದುರ್ಗಂಧವಾಯುವಿನ ಸಂಪರ್ಕವು ಲೇಶವಾದರೂ ಮಾನವನಿಗೆ ತಟ್ಟಬಾರದೆಂದು ಮನುಷ್ಯನು ವಾಸಿಸುವ ಸ್ಥಳದಿಂದ ಬಹುದೂರದಲ್ಲಿ ಒಳ್ಳೇವ್ಯವಸ್ಥೆಯನ್ನು ಮಾಡಿದ್ದಾರೆ. ಪಶುಗಳು ತಮ್ಮ ಮೂತ್ರಗಳನ್ನು ದಿನಾಲು ಕುಡಿಯಹತ್ತಲು ಅವುಗಳ ಹಲ್ಲುಗಳು ಬಿದ್ದು

ಹೋಗುವವೆಂಬ ಅನುಭವವು ಸಕಲರಿಗೂ ಉಂಟು. ಇದಕ್ಕಿಂತಲೂ ವಿಷಕಾರಕಗಳಾದ ಮಾನವನ ಮಲಮೂತ್ರಗಳ ವಾಯುವಿನ ಸಂಪರ್ಕವು ಅತಿ ಕೇಡನ್ನುಂಟುಮಾಡುವದು. ಇಂಥ ವಾಯುವಿನ ಸಂಪರ್ಕವಾದಕೂಡಲೆ ದಂತಪಂಕ್ತಿಗಳ ಬೇರುಗಳು ಶಿಥಿಲವಾಗುವವು. ಇದೂ ಅಲ್ಲದೆ ನೇತ್ರಗಳ ತೇಜಸ್ಸು ಕುಂದಿಹೋಗುವದು. ಅಂತೆಯೇ ಆಚಾರಗ್ರಂಥಗಳಲ್ಲಿ ಮೇಲೆ ಹೇಳಿದಂತೆ ವಿಧಿಯನ್ನಾಗಿ ಮಾಡಿದ್ದಾರೆ. ವೈದ್ಯರೂ ಸಹ ಈ ದುರ್ಗಂಧ ವಾಯುವಿನಿಂದ ದೂರ ಇರುವದು ಒಳಿತೆಂದು ಅಭಿಪ್ರಾಯಪಡುವರು. ಆದ್ದರಿಂದಲೇ ಪ್ರತಿಯೊಬ್ಬನೂ ದಿನಾಲು ಹಗಲು ಉತ್ತರಮುಖವಾಗಿಯೂ ರಾತ್ರಿಯಲ್ಲಿ ದಕ್ಷಿಣಮುಖವಾಗಿಯೂ ಉಭಯ ಸಂಧ್ಯಾ ಸಮಯಗಳಲ್ಲಿ ಉತ್ತರ ಮುಖವಾಗಿಯೂ ಕುಳಿತು ಮಲಮೂತ್ರಗಳನ್ನು ಬಿಡತಕ್ಕದ್ದು. ಹೀಗೆ ಮಾಡುವದರಿಂದ ಆರೋಗ್ಯವು ಸಹಜವಾಗಿ ಸಾಧಿಸಬಹುದು.

## ಮಲಮೂತ್ರಗಳನ್ನು ಬಿಡತಕ್ಕ ಸ್ಥಳವು

ಆನ್ಹಿಕ ಸೂತ್ರದಲ್ಲಿ "ಪಥಿಗೋಷ್ಠೇನದೀತೀರೆ ಛಾಯಾಯಾಂಕೂಪ ಸನ್ನಿಧೌ। ವಿಣ್ಮೂತ್ರೋತ್ಸರ್ಜನಂ ನಕುರ್ಯಾದುದ್ಯಾನೆ ದೇವಮಂದಿರೆ ॥ ಅಂದರೆ ಮಾರ್ಗಗಳ ಸಮೀಪದಲ್ಲಿಯೂ ದನಗಳನ್ನು ಕಟ್ಟುವಸ್ಥಳಗಳಲ್ಲಿಯೂ ಹೊಳೆ, ಹಳ್ಳ, ಕೆರೆ, ಬಾವಿ ಮುಂತಾದ ಜಲಾಶಯಗಳ ಸಮೀಪದಲ್ಲಿಯೂ ಗಿಡಗಳ ನೆರಳಿನಲ್ಲಿಯೂ ಗುಡಿಗಳ ಸಮಾಪದಲ್ಲಿಯೂ ಇದರಂತೆ ಸ್ಮಶಾನ ಮೊದಲಾದ ಸ್ಥಳಗಳಲ್ಲಿಯೂ ಮಲಮೂತ್ರಗಳನ್ನು ಬಿಡತಕದ್ದಲ್ಲವೆಂದು ಬರೆದಿದ್ದಾರೆ. ಈ ಎಲ್ಲ ಸ್ಥಳಗಳಲ್ಲಿಯೂ ಜನರ ಸಂಚಾರವು ವಿಶೇಷವಾಗಿ ರುವದರಿಂದ ಅಂಥಲ್ಲಿ ಮಲಮೂತ್ರಗಳನ್ನು ಬಿಡುವದರಿಂದ ಹವೆಯು ದೂಷಿತವಾಗಿ ಆರೋಗ್ಯವು ಕೆಡುವದುಂಟು. ಮಾನವರು ತಮ್ಮ ಕರ್ಮ ನಿವಾರಣೆಗಾಗಿ ದೇವಾಲಯಗಳಿಗೆ ದರ್ಶನಾರ್ಥಿಗಳಾಗಿ ಹೋಗುವದುಂಟು. ಬೇರೆ ಕೆಲ ಜನರು ಆ ಸ್ಥಳದಲ್ಲಿಯೇ ವಾಸಿಸುವದುಂಟು. ಇಂಥ ಸ್ಥಳಗಳಲ್ಲಿ ಮಲಮೂತ್ರಗಳನ್ನು ಬಿಡುವದು ಒಳಿತಲ್ಲ. ಇದರಂತೆ ಸ್ಮಶಾನ ಭೂಮಿಗಳ ಲ್ಲಿಯೂ ಗಿಡಗಳ ನೆರಳಿನಲ್ಲಿಯೂ ಜನರು ವಾಸಿಸುವದುಂಟು. ಇದೂ ಅಲ್ಲದೆ ಬಿಲ್ವ, ಬನ್ನಿ, ಕಾರಿ ಮುಂತಾದ ಗಿಡಗಳ ಮತ್ತು ಮಲ್ಲಿಗೆ ಸೇವಂತಿಗೆ ಮುಂತಾದ ಬಳ್ಳಿಗಳ ಹತ್ತರ ಜನರು ಯಾವಾಗಲೂ ವಿಶೇಷವಾಗಿ ಕಾಲ ಕಳೆಯುತ್ತಿರುವರು. ಯಾಕಂದರೆ ದೇವಪೂಜೆಗಾಗಿ ಪತ್ರಿ-ಹೂವುಗಳನ್ನು

ಜನರು ದಿನಾಲು ಉಪಯೋಗಿಸುತ್ತಾರೆ. ಪ್ರತಿಯೊಬ್ಬ ಹಿಂದುವು ತನ್ನ ಇಷ್ಟದೇವತಾಪೂಜೆಗಾಗಿ ದಿನಾಲು ಪ್ರಾತಃಕಾಲದಲ್ಲಿ ಎದ್ದಕೂಡಲೆ ಮುಖ ಮಾರ್ಜನೆಯನ್ನು ತೀರಿಸಿಕೊಂಡು ಇವುಗಳನ್ನು ಸಂಗ್ರಹಿಸಲು ಮೇಲೆ ಬರೆದ ವೃಕ್ಷಲತೆಗಳ ಸಾಮೀಪ್ಯವನ್ನು ಹೊಂದುತ್ತಾನೆ. ಇಂಥ ಸ್ಥಳಗಳ ಹವೆಯು ದೂಷಿತವಾದದ್ದಾದರೆ ಮನುಷ್ಯರ ಆರೋಗ್ಯವು ಸಹಜವಾಗಿ ಹಾಳಾಗುವದು. ಇದರಂತೆ ಜಲವು ಸಕಲ ಪ್ರಾಣಿಗಳ ಜೀವನಾಧಾರವು. ಇದಿಲ್ಲದೆ ಯಾವ ಜೀವಿಯೂ ಜೀವಿಸಲಾರದು. ಜೀವನಕ್ಕೆ ಸ್ವಚ್ಛವಾದ ಜಲವು ಸಹಾಯಕಾರಿಯಾಗಿರುವದು. ಜಲವು ದೂಷಿತವಾದರೆ ಅದರಿಂದ ಆರೋಗ್ಯತಪ್ಪಿ ಸುಖದ ಬದಲು ದುಃಖವಾಗುವದು. ಅತ್ಯಂತ ಅಪಾಯ ಕಾರಕ ಮಲಿನ ಪದಾರ್ಥಗಳೆಂದರೆ ಮಲಮೂತ್ರಗಳು. ಇವುಗಳನ್ನು ಮೇಲೆ ಹೇಳಿದ ಜಲಾಶಯಗಳ ಸಮೀಪದಲ್ಲಿ ಬಿಡುವದರಿಂದ ಆ ಮಲಿನ ಪದಾರ್ಥಗಳು ಜಲದಲ್ಲಿ ಕೂಡಿಕೊಳ್ಳುತ್ತವೆ. ಹೀಗಾಗುವದರಿಂದ ಜಲವು ದೂಷಿತವಾಗುತ್ತದೆ ಇಂಥ ಜಲವನ್ನು ಜನರು ಉಪಯೋಗಿಸಲು ಅಪಾಯವು ತಪ್ಪದೇ ಆಗುವದು. ಕಾರಣ ಎಲ್ಲರೂ ತಮ್ಮ ಆರೋಗ್ಯತೆಗೆ ಅವಶ್ಯವಾದ ಸ್ಥಳಗಳಲ್ಲಿ ಮಲಮೂತ್ರಗಳನ್ನು ಎಂದೂ ಬಿಡಬಾರದೆಂಬದಾಗಿ ಯಾವಾಗಲೂ ಎಚ್ಚರದಿಂದಿರುವದು ಒಳಿತವು.

## ಮಲಮೂತ್ರ ಸ್ವಚ್ಛಮಾಡುವ ರೀತಿಯು.

ಮಲಮೂತ್ರಗಳನ್ನು ಜನರ ಸಂಚಾರವಿಲ್ಲದಲ್ಲಿಯೂ ಮೇಲೆ ಹೇಳಿದ ಯಾವತ್ತೂ ಸ್ಥಳಗಳನ್ನು ಬಿಟ್ಟು ಉಳಿದ ಸ್ಥಳಗಳಲ್ಲಿ ಮಲಮೂತ್ರಗಳನ್ನು ತ್ಯಜಿಸಿದರೆ ಆರೋಗ್ಯವು ಸಾಧಿಸಿದಂತಾಯಿತೆಂತಲ್ಲ. ಮಲಮೂತ್ರಗಳು ದೇಹವನ್ನು ಬಿಟ್ಟು ಹೋದರೂ ಅವು ಹೊರಬಿದ್ದು ಹೋಗುವಾಗ್ಗೆ ಮಲಿನವು ಹೊರಡುವ ಸ್ಥಾನಗಳಿಗೆ ಅಂಟಿಕೊಳ್ಳುವವು. ಅದು ಜಿಗಟಾದ್ದರಿಂದ ಆಯಾ ಸ್ಥಾನಗಳಿಗೆ ಹತ್ತಿದ ಮಲಿನವನ್ನು ಸ್ವಚ್ಛವಾಗಿ ತಿಕ್ಕಿ ತೊಳೆಯತಕ್ಕದ್ದು. ಚನ್ನಾಗಿ ತಿಕ್ಕಿ ತೊಳೆಯದೆ ನೀರು ಸುರುವಿ ಹಸನಾಯಿತೆಂದು ತಿಳಿದು ಉದಾಶೀನಮಾಡಿದ್ದಾದರೆ ಆರೋಗ್ಯಕ್ಕೆ ಬಾಧೆ ಬರುವದು. ಮಲಿನ ಕ್ಷಾಲನವನ್ನು ಕುರಿತು ಕ್ರಿಯಾಸಾರವೆಂಬ ಗ್ರಂಥದಲ್ಲಿ "ಪ್ರಕ್ಷಾಲಯೇದ್ಗುದಂ ಶಿಶ್ನಂ ಮೃದ್ಭಿರಪ್ಯುಧೃತೈರ್ಜಲೈಃ। ಏಕಂ ಲಿಂಗಂಗುದಂ ಪಂಚತಥೈವ ಕರ

ವಲ್ಲವೆ || ಅಂದರೆ ಮಲಮೂತ್ರ ಹೊರಡುವ ಸ್ಥಾನಗಳಾದ ಗುದ ಮತ್ತು ಶಿಶ್ನ ಸ್ಥಾನಗಳನ್ನು ಉತ್ತಮವಾದ ಮಣ್ಣಿನಿಂದ ಮತ್ತು ನೀರಿನಿಂದ ಶಿಶ್ನವನ್ನು ಒಂದು ಸಾರೆಯಾಗಿಯೂ ಗುದವನ್ನು ಐದು ಸಾರೆಯಾಗಿಯೂ ಅದರಂತೆ ಕೈ ಕಾಲುಗಳನ್ನು ಐದು ಸಾರೆಯಾಗಿಯೂ ತೊಳೆದುಕೊಳ್ಳಬೇಕೆಂದು ಬರೆದಿದ್ದಾರೆ. ಮೂತ್ರವು ಮಲದಷ್ಟು ಜಿಗುಟು ಪದಾರ್ಥವಲ್ಲದ್ದರಿಂದ ಅದು ಹೊರಡುವ ಸ್ಥಾನ (ಶಿಶ್ನ)ವನ್ನು ಒಂದೇ ಸಾರೆ ತಿಕ್ಕಿ ಜಲದಿಂದ ತೊಳೆದರೆ ಅದರ ದುರ್ಗಂಧವೆಲ್ಲ ಹೋಗಿ ಸ್ವಚ್ಛವಾಗುವದುಂಟು. ಮಲವು ಮೂತ್ರಕ್ಕಿಂತ ಜಿಗಟು. ಮೂತ್ರ ಸ್ಥಳವನ್ನು ಒಂದೇ ಸಾರೆ ತಿಕ್ಕಿ ತೊಳೆದಂತೆ ಗುದವನ್ನು ಒಂದೇ ಸಾರೆ ತೊಳೆದರೆ ಅದು ಸ್ವಚ್ಛವಾಗುವದಿಲ್ಲ. ತಿಕ್ಕಿ ತೊಳೆಯುತ್ತಿರಲು ಮಲವು ಕೈಗೆ ಹತ್ತುವುದು. ಕೈ ಮತ್ತು ಪೃಷ್ಟವನ್ನು ಹೆಚ್ಚಾಗಿ ಸ್ವಚ್ಛಮಾಡುವ ಭಾಗ ಬೀಳುವದರಿಂದ ಅವುಗಳನ್ನು ಮಣ್ಣಿನಿಂದ ತಿಕ್ಕಿ ಜಲದಿಂದ ತೊಳೆದರೆ ಅವು ಸ್ವಚ್ಛವಾಗುವವೆಂಬ ಉದ್ದೇಶದಿಂದಲೇ ಆಚಾರ ಗ್ರಂಥಕಾರರು ಹೀಗೆ ಬರೆದಿದ್ದಾರೆ. ಇದರಂತೆಯೇ ಬೋಧಮಾಡುವ ಅನೇಕ ಗ್ರಂಥಗಳಲ್ಲಿ ಆಚಾರವಂತರು ತುಸು ಹೆಚ್ಚು ಕಡಿಮೆ ಅನೇಕ ಪ್ರಕಾರವಾಗಿ ಹೇಳಿದ್ದಾರೆ. ಅವೆಲ್ಲವುಗಳು ಆರೋಗ್ಯತೆಯನ್ನು ಕಾಯ್ದುಕೊಳ್ಳುವದಕ್ಕಾಗಿಯೇ ಹೇಳಿದವುಗಳಾಗಿವೆ ಎಂಬುವದು ವಿಚಾರವಂತನಾದ ಪ್ರತಿಯೊಬ್ಬನಿಗೂ ತೋಚದಿರದು. (ಒಟ್ಟಿನ ಮೇಲೆ ವಿಸರ್ಜನೆಯಾದ ನಂತರ ಪ್ರತಿಯೊಬ್ಬನು ಕನಿಷ್ಠ ಪಕ್ಷಕ್ಕಾದರೂ ಗುದವನ್ನು ಎರಡು ಸಾರೆಯಾಗಿಯೂ ಗುಹ್ಯವನ್ನು ಒಂದು ಸಾರೆಯಾಗಿಯೂ ಮಣ್ಣಿನಿಂದ ತಿಕ್ಕಿ ನೀರಿನಿಂದ ತೊಳೆದುಕೊಳ್ಳಬೇಕು.) ಆ ಮೇಲೆ ಮೈಮೇಲಿನ ಬಟ್ಟೆಗಳನ್ನು ಮುಟ್ಟದೆ ಎಡಹಸ್ತವನ್ನು ಮೂರು ಸಾರೆಯಾಗಿ ಎರಡೂ ಹಸ್ತಗಳನ್ನು ಮೂರುಸಾರೆಯಾಗಿ ಮಣ್ಣಿನಿಂದ ತಿಕ್ಕಿ ತೊಳೆದುಕೊಳ್ಳಬೇಕು.

## ಶೌಚಪಾತ್ರೆಯನ್ನು ಸ್ವಚ್ಛಮಾಡುವ ರೀತಿಯು.

ಶೌಚಕ್ಕಾಗಿ ಉಪಯೋಗಿಸಿದ ಪಾತ್ರೆಯನ್ನು ಮಲಿನಸ್ಥಳದಲ್ಲಿ ಇಡುವದರಿಂದ ಅದಕ್ಕೆ ಅಲ್ಲಿದ್ದ ಸೂಕ್ಷ್ಮ ಅಪಾಯಕಾರಕ ಕ್ರಿಮಿಗಳು ಅಂಟಿಕೊಳ್ಳುವವು. ಶೌಚವಿಧಿಯು ತೀರಿದಕೂಡಲೆ ಆ ಪಾತ್ರೆಯನ್ನು ಮಣ್ಣಿನಿಂದ ಚನ್ನಾಗಿ ತಿಕ್ಕಿ ಸ್ವಚ್ಛ ನೀರಿನಿಂದ ತೊಳೆಯಬೇಕು. ಉತ್ತಮ

ಕುಲದವರೆಂದು ಹೇಳಿಸಿಕೊಳ್ಳುವ ಕೆಲವುಜನರು ಶೌಚಕ್ಕಾಗಿ ಸ್ವಚ್ಛ ಪಾತ್ರೆಯನ್ನು ಉಪಯೋಗಿಸುವದುಂಟು. ವಿಧಿಯು ತೀರಿದ ತರುವಾಯ ಮಣ್ಣಿನಿಂದ ತಿಕ್ಕಿ ಹಸನುಮಾಡದೆ ಕೇವಲ ನೀರಿನಿಂದ ತೊಳೆದು ಬಳಿಕೆಯ ಪಾತ್ರೆಗಳಲ್ಲಿ ಕೂಡಿಸುವದನ್ನು ನಾವು ದಿನಾಲು ಕಂಣಾರೆ ನೋಡುತ್ತಿರುವೆವು. ಹೀಗೆ ಮಾಡುವದು ವಿಹಿತವಲ್ಲ. ಶೌಚಸ್ಥಾನದೊಳಗಿನ ಕ್ರಿಮಿಗಳು ಕಂಣಿಗೆ ಕಾಣಿಸದಷ್ಟು ಸೂಕ್ಷ್ಮವಾಗಿರುವವು. ಪಾತ್ರೆ ಸ್ವಚ್ಛವಿರುವದೆಂದು ತಿಳಿದುಕೊಂಡರೂ ಅದಕ್ಕೆ ಅಂಟಿಕೊಂಡಿದ್ದ ಕ್ರಿಮಿಗಳು ಮಾತ್ರ ನಮ್ಮ ಕಂಣಿಗೆ ಕಾಣಿಸುವದಿಲ್ಲ. ಮಂಣಿನಿಂದ ತಿಕ್ಕಿ ತೊಳೆಯದ ಹೊರತು ಅವು ನಾಶವಾಗುವದಿಲ್ಲ. ಇನ್ನು ಕೆಲವು ಜನರು ಮಲಮೂತ್ರವಿಸರ್ಜನೆಗಾಗಿ ಒಂದು ಪಾತ್ರೆಯನ್ನು ಪ್ರತ್ಯೇಕವಾಗಿ ಗೊತ್ತುಮಾಡಿ ಮನೆಯ ಮೂಲೆಯ ಒಂದು ಸ್ಥಳದಲ್ಲಿ ಅದನ್ನು ಇಟ್ಟುಬಿಡುವರು. ಇದು ಉತ್ತಮವು. ಆದರೆ ಮನೆಯೊಳಗಿದ್ದ ಎಲ್ಲಜನರೂ ಅದನ್ನೇ ಉಪಯೋಗಿಸುವದುಂಟು. ಒಬ್ಬರೂ ಅದನ್ನು ಮಣ್ಣಿನಿಂದ ತಿಕ್ಕಿ ನೀರಿನಿಂದ ತೊಳದಿಡುವದಿಲ್ಲ. ಪ್ರತಿಯೊಬ್ಬರೂ ಹಾಗೇ ಉಪಯೋಗಿಸುವರು. ಅದು ಆ ಮನೆಯೊಳಗಿನ ಯಾವ ಮುತ್ತಜ್ಜನಿಂದ ಗೊತ್ತುಮಾಡಲ್ಪಟ್ಟಿರುವದೋ ದೇವರೇ ಬಲ್ಲ. ಆ ಕಾಲದಿಂದ ಈವರೆಗೂ ಅದಕ್ಕೆ ಸ್ವಚ್ಛತೆಯ ಸಂಸ್ಕಾರವೇ ಇರುವದಿಲ್ಲ. ಒಂದುಸಾರೆ ಶೌಚಕ್ಕೆ ಒಯ್ದ ಪಾತ್ರೆಗೆ ಕ್ರಿಮಿಗಳು ಅಂಟುತ್ತಿರುವಾಗ್ಗೆ ಯಾವದೋ ಕಾಲದಿಂದ ಅದೇಸ್ಥಳದಲ್ಲಿಯೇ ತನ್ನ ಜನ್ಮವನ್ನು ಕಳೆದ ಪಾತ್ರೆಗೆ ಅದೆಷ್ಟೋ ಕ್ರಿಮಿಗಳು ಅಂಟಿಕೊಂಡಿರುವವೋ ತಿಳಿಯದು. ಆ ಕ್ರಿಮಿಗಳೆಲ್ಲ ಮನೆಯೊಳಗೆ ಪಸರಿಸಿ ಸ್ನಾನಮಾಡುವ ಮತ್ತು ಕುಡಿಯುವ ಜಲಗಳಲ್ಲಾಗಲಿ ಅನ್ಯಪಾತ್ರೆಗಳಿಗಾಗಲಿ ಹತ್ತಿಕೊಂಡು ನಿಶ್ಚಯವಾಗಿ ಕೇಡನ್ನುಂಟುಮಾಡುವವು. ಕಾರಣ ರೋಗಬಾಧೆಗೆ ಅವಕಾಶಕೊಡದಂತೆ ಪ್ರತಿ ಶೌಚಕಾಲಕ್ಕೊಮ್ಮೆ ಉಪಯೋಗಿಸಿದ ಪಾತ್ರೆಯನ್ನು ಸಾಧಾರಣವಾಗಿ ಮೂರು ಅಥವಾ ಒಂದು ಸಾರೆಯಾದರೂ ಉತ್ತಮ ಮಂಣಿನಿಂದ ತಿಕ್ಕಿ ಸ್ವಚ್ಛನೀರಿನಿಂದ ತೊಳೆಯಲಿಕ್ಕೆ ಬೇಕು.

## ಶೌಚಶುದ್ಧತೆಗೆ ಉಪಯೋಗಿಸತಕ್ಕ ಮಂಣು

ಶೌಚಶುದ್ಧಿಗಾಗಿ ಉಪಯೋಗಿಸಬೇಕಾದ ಮಂಣಾದರೂ ಉತ್ತಮ ಸ್ಥಳದೊಳಗಿನದಾಗಿರಬೇಕು. ಅಂದರೆ ಆರೋಗ್ಯಕ್ಕೆ ಅನುಕೂಲವು.

ಆದ್ದರಿಂದಲೇ ಆಚಾರಗ್ರಂಥದೊಳಗೆ "ಮಾರ್ಗಮಧ್ಯೆದೇವಗೇಹೆವಲ್ಮೀಕೆ ಮೂಷಕಸ್ಥಲೆ । ಅಶುದ್ಧದೇಶೆಶೌಚಾರ್ಥಂನರೋಗ್ರಾಹ್ಯಂನವೃತ್ತಿಕಾಂ" ಅಂದರೆ ಜನರು ಸಂಚರಿಸತಕ್ಕ, ಸ್ಥಳದೊಳಗಿನ ಮತ್ತು ದೇವಾಲಯದೊಳಗಿನ, ಹುತ್ತಿನೊಳಗಿನ, ಸಂಣ ಸಂಣ ರಂಧ್ರದೊಳಗಿನ ಮಂಣನ್ನು ಶೌಚ ಶುದ್ಧತೆಗಾಗಿ ಉಪಯೋಗಿಸಬಾರದೆಂದು ಉಲ್ಲೇಖಿಸಿದ್ದಾರೆ.

ಜನರು ಯಾವಾಗಲೂ ಸಂಚರಿಸತಕ್ಕ ಸ್ಥಳವು ಮಲಿನವಾಗಿರುವದೆಂಬ ಅನುಭವವುಂಟು. ದೇವಸ್ಥಾನಕ್ಕೆ ಜನರು ಒಂದೇಸವನೆ ಸಂಚರಿಸುತ್ತಿರುವರು. ಇದರಂತೆ ಸಾರ್ವಜನಿಕ ಸ್ಥಳಗಳಾದರೂ ಅನೇಕ ಹೊಲಸಿನಿಂದ ಕೂಡಿಕೊಂಡಿರುವವು. ಹುತ್ತಿನೊಳಗಿನ ಅಥವಾ ಸಂಣ ಸಂಣ ರಂಧ್ರದೊಳಗಿನ ಮಂಣನ್ನು ಉಪಯೋಗಿಸಹೋಗಲು ಅಲ್ಲಿರತಕ್ಕ ಹಾವು, ಹೆಗ್ಗಣ, ಇಲಿ, ಚೇಳು ಮೊದಲಾದ ವಿಷಕಾರಕ ಜಂತುಗಳ ಬಾಧೆ ತಟ್ಟುವದು. ಮತ್ತು ಅಲ್ಲಿಯ ಮಂಣೂ ಸಹ ಆ ವಿಷಹಾರಿ ಪ್ರಾಣಿಗಳ ಸಂಸರ್ಗದಿಂದ ಮಲಿನವಾಗಿರುವದು. ಬೇರೆ ಯಾವ ಕಾರಣದಿಂದಲಾದರೂ ಅಶುದ್ಧವಾಗಿರತಕ್ಕ ಸ್ಥಳಗಳಲ್ಲಿಯ ಅಂದರೆ ತಿಪ್ಪಿ, ಶೌಚಕೂಪ ಮೊದಲಾದ ಮಲಿನ ಸ್ಥಳದೊಳಗಿನ ಮಂಣೂ ಸಹಸ್ವಭಾವದಿಂದ ದೂಷಿತವಾಗಿರುವದು. ಇಂಥ ಮಣ್ಣನ್ನು ಶೌಚವಿಧಿಗಾಗಿ ಉಪಯೋಗಿಸುವದೆಂದರೆ ಆರೋಗ್ಯಕ್ಕೆ ವಿರುದ್ಧವೇ ಸರಿ. ಆದ್ದರಿಂದಲೇ ವಿಶ್ವಧರ್ಮಿಗಳು ದಿನದ ವ್ಯವಹಾರದಲ್ಲಿಯೂ ಕೂಡ ಮಾನವನಿಗೆ ಆರೋಗ್ಯವು ಸಹಜವಾಗಿ ಸಾಧಿಸಲೆಂದು ತಿಳಿದು ಮೇಲೆ ಹೇಳಿದ ನೇಮಗಳನ್ನು ಮಾಡಿಕೊಟ್ಟಿರುವರು. ಅವುಗಳಲ್ಲಿ ಮಲವಿಸರ್ಜನೆಯು ನೇಮವು ಎರಡನೆಯದಾಗಿರುವದು.




# ದಂತಧಾವನವು

## ( ಹಲ್ಲುಗಳನ್ನು ಹಸನು ಮಾಡುವ ರೀತಿಯು. )

ಪ್ರತಿ-ದಿನ ಮನೆಯೊಳಗೆ ಬಳಕೆಯಲ್ಲಿ ಉಪಯೋಗಿಸುವ ತಂಬಿಗೆ, ತಾಲಿ,ತಪ್ಪೇಲಿ, ಕೊಡ ಮೊದಲಾದ ಪಾತ್ರೆಗಳನ್ನು ದಿನಾಲು ತಪ್ಪದೆ ಸ್ವಚ್ಛ ಮಾಡುತ್ತೇವಷ್ಟೇ ? ಇಲ್ಲವಾದರೆ ಅವುಗಳು ಮಲಿನವಾಗಿ ಅಂದರೆ ಕಿಲುಬು ಆಗಿ ಬಳಿಕೆಗೆ ಬಾರದಂತಾಗುವವು. ಹೀಗಾದವೆಂದರೆ ಅವುಗಳು ಹಾಕಿದ ಪದಾರ್ಥಗಳ ರುಚಿಯನ್ನು ಬೇರೆಮಾಡಿ ಬಿಡುತ್ತವೆ. ಅಂದರೆ ರುಚಿಯುಕ್ತ ಆರೋಗ್ಯ ಪದಾರ್ಥಗಳನ್ನು ಕೆಡಿಸಿ ದೋಷಯುಕ್ತ ಅನಾರೋಗ್ಯ ಪದಾರ್ಥಗಳನ್ನಾಗಿ ಮಾಡುತ್ತವೆ. ಹಿತಪದಾರ್ಥವು ಅಹಿತವಾಗಲು ಆಪಾತ್ರೆಗಳಲ್ಲಿ ಹುಟ್ಟಿದ ಮಲಿನವೇ ಕಾರಣವು. ಆ ಮಲಿನವನ್ನು ದಿನಾಲು ತಿಕ್ಕಿತೊಳೆಯದೇ ಬಿಟ್ಟಲ್ಲಿ ನಮ್ಮ ಆರೋಗ್ಯಕ್ಕೆ ಅಡ್ಡಿಯಾಗಿ ಹ್ಯಾಗೆ ಅಹಿತವಾಗುವದೋ ಹಾಗೆಯೇ ಆರೋಗ್ಯಮಹಾದ್ವಾರಗಳಾದ ಹಲ್ಲುಗಳನ್ನು ನಾವು ದಿನಾಲು ತಿಕ್ಕಿ ತೊಳೆಯದೆ ಹೋದರೆ ನಮ್ಮ ಆರೋಗ್ಯವು ಹಾಳಾಗಿ ದುಃಖಕ್ಕೀಡಾಗಬೇಕಾಗುವದು. ಆದ್ದರಿಂದ ಪ್ರತಿಯೊಬ್ಬರೂ ತಪ್ಪದೇ ತಮ್ಮ ಹಲ್ಲುಗಳನ್ನು ನಿರ್ಮಲವಾಗಿಡತಕ್ಕದ್ದೆಂಬುವದು ಕೆಳಗಿನ ಸಂಗತಿಯಿಂದ ಗೊತ್ತಾಗುವದು.

ಪ್ರಾಣಿಗಳ ದೇಹ ಧಾರಣೆಗೆ ಅಹಾರವು ಮುಖ್ಯವಾಗಿಬೇಕು. ಆಹಾರವು ಹೊಟ್ಟೆಯೊಳಗೆ ಹೋಗುವದಕ್ಕಿಂತ ಪೂರ್ವದಲ್ಲಿಯೇ ಹಲ್ಲುಗಳು ಆಹಾರವನ್ನು ಕಡಿದು ಪುಡಿ ಪುಡಿ ಮಾಡಿ ಅರೆದು ಬೀಸಿ ಸಣ್ಣಾಗಿ ರಸವನ್ನಾಗಿ ಮಾಡುತ್ತವೆ. ತಿಂದ ಆಹಾರವು ಸಣ್ಣಾಗದಹೊರತು ಅದು ಪ್ರಾಣಿಗಳ ಹೊಟ್ಟೆಯಲ್ಲಿ ಹೊಕ್ಕು ಹಿತವನ್ನುಂಟು ಮಾಡಲಾರದು. ಅಹಾರವನ್ನು ಸಣ್ಣಾಗಿ ಮಾಡುವ ಮಹತ್ವದ ಕಾರ್ಯವನ್ನು ಹಲ್ಲುಗಳು ಸ್ವಭಾವತಃ ಕೈಕೊಂಡಿರುವವು. ಹಲ್ಲುಗಳು ಗಟ್ಟಿಯಾಗಿಯೂ ಸ್ವಚ್ಛವಾಗಿಯೂ ಇದ್ದರೇನೇ ಬಹುಕಾಲದವರೆಗೂ ಆಹಾರವನ್ನು ಅರೆದು ಸಣ್ಣ ಮಾಡುವ ಶಕ್ತಿಯು ಅವುಗಳಿಗುಂಟಾಗುವದು. ಪ್ರತಿಯೊಂದು ಪ್ರಾಣಿಯು

ಆಹಾರವನ್ನು ಬಾಯೊಳಗೆ ಹಾಕಿಕೊಂಡು ತನ್ನ ಹಲ್ಲುಗಳಿಂದ ಚನ್ನಾಗಿ ಚರ್ವಣವನ್ನು ಮಾಡಿ ಸಂಣಾದಮೇಲೆ ಅದನ್ನು ನುಂಗುವದು. ಬೇರೆ ಕೆಲವು ಪ್ರಾಣಿಗಳು ಆಹಾರವನ್ನು ಮೊದಲು ಅಬಡುಜಬಡು ಮಾಡಿ ತೀವ್ರವಾಗಿ ನುಂಗಿ ಕೆಲವು ಕಾಲದ ಮೇಲೆ ಅದನ್ನೇ ಮರಕಳಿಸಿ ತೆಗೆದುಕೊಂಡು ಪುನಃ ಹಲ್ಲಿನಿಂದ ಜಗಿದು ಸಂಣಮಾಡಿ ನುಂಗುವದುಂಟು. ಒಟ್ಟಿನಮೇಲೆ ಬಹು ತರವಾಗಿ ಎಲ್ಲ ಪ್ರಾಣಿಗಳು ತಮ್ಮ ತಮ್ಮ ಆಹಾರವನ್ನು ಹಲ್ಲುಗಳಿಂದ ಸಂಣಾಗಿ ಅರೆದು ಚೂರ್ಣಮಾಡಿ ನುರಿಸುತ್ತವೆ ಎಂಬ ಅನುಭವವು ಎಲ್ಲರಿಗೂ ಉಂಟು. ಅಂದ ಮೇಲೆ ಯಾವತ್ತೂ ಪ್ರಾಣಿಗಳ ಸುಖಜೀವನಕ್ಕೆ ಹಲ್ಲು ಗಳೇ ಕಾರಣಗಳು ಅಂದ ಹಾಗಾಯಿತು. ಅವುಗಳು ನಿರ್ಮಲವಾಗಿಯೂ ಗಟ್ಟಿಯಾಗಿಯೂ ಇಲ್ಲದಿದ್ದರೆ ಆಹಾರವನ್ನು ಅರೆದು ಸಂಣ ಮಾಡುವ ಶಕ್ತಿಯು ಅವುಗಳಿಗೆ ಬರಲಾರದು. ಇದು ಅಲ್ಲದೆ ಹಲ್ಲುಗಳು ಸ್ವಚ್ಛವಾಗಿರ ದಿದ್ದರೆ ತಿಂದ ಆಹಾರವೂ ಕೂಡ ಮಲಿನವಾಗುವದುಂಟು. ಆದ್ದರಿಂದ ಪ್ರತಿಯೊಬ್ಬರು ಹಲ್ಲುಗಳ ಮಹತ್ವವನ್ನರಿತುಕೊಳ್ಳುವದು ಅವರ ಪ್ರಥಮ ಕರ್ತವ್ಯವಾಗಿರುವದು.

ಮನುಷ್ಯನು ಆಹಾರವನ್ನು ತನ್ನ ಹಲ್ಲುಗಳಿಂದ ಸಂಣಾಗಿ ಚರ್ವಣ ಮಾಡಹತ್ತಲು ಹಲ್ಲುಗಳ ಒಸಡಿಗಳ ಸುತ್ತಲಿನ ಸ್ಥಾನಗಳಲ್ಲಿಯೂ ಅವುಗಳ ನಡುವಿನ ಸಂದುಗಳಲ್ಲಿಯೂ ಆಹಾರದ ಸಂಣ ಸಂಣ ಕಣಗಳು ಅಂಟಿ ಕೊಳ್ಳುವದು ಸ್ವಾಭಾವಿಕವು. ಈ ಕಣಗಳನ್ನು ಮೇಲಿಂದ ಮೇಲೆ ತಿಕ್ಕಿ ತೊಳೆಯದಿದ್ದರೆ ಹಲ್ಲುಗಳ ಮೇಲೆ ಕಲೆಯಾಗಹತ್ತುವದು. ಈ ಕಲೆಯುಳ್ಳ ಹಲ್ಲುಗಳೇ ಮುಂದೆ ಹುಳುಕಾಗುವವು. ಪಿಷ್ಟಮಯ ಪದಾರ್ಥಗಳನ್ನು ಬಾಯೊಳಗೆ ಹಾಕಿಕೊಂಡು ನುರಿಸಹತ್ತಲು ಕೂಡಲೇ ಆಹಾರದೊಳಗಿನ ಜಿಗಟು ಮುದ್ದೆಯಾಗಿ ಹುಳಕ ಹಲ್ಲುಗಳಲ್ಲಿಯೂ ಎಲ್ಲ ಹಲ್ಲುಗಳ ಎಡ ಬಲ ಸಂದುಗಳಲ್ಲಿಯೂ ಅಂಟಿಕೊಳ್ಳುವದು. ಈ ಜಗವನ್ನು ಸ್ವಚ್ಛವಾಗಿ ತೊಳೆಯದಿದ್ದಲ್ಲಿ ಅದರ ಪೃಥಕ್ಕರಣವು ಸುರುವಾಗಿ ಕೊಳೆಯ ಹತ್ತುವದು. ಮುಂದೆ ತುಸುಹೊತ್ತಿನಲ್ಲಿಯೇ ಬಾಯೊಳಗಿಂದ ಹೊಲಸು ವಾಸನೆಯುತ್ಪನ್ನ ವಾಗುವದು. ಈ ಹೊಲಸು ಹಲ್ಲುಗಳ ಸಂದಿನೊಳಗೆ ವಿಶೇಷವಾಗಿ ಕೂಡ ಬಿದ್ದಿತೆಂದರೆ ರೋಗ ಜಂತುಗಳು ತೀವ್ರವಾಗಿ ಅದರಲ್ಲಿ ಉತ್ಪನ್ನವಾಗುವವು. ಈ ಜಂತುಗಳು ಮೊದಲು ದಂತಕವಚವನ್ನೂ ಆಮೇಲೆ ದಂತಸಾಮುಗ್ರಿ

ಯನ್ನೂ ಕೊನೆಗೆ ದಂತಪಿಂಡವನ್ನೂ ನಾಶಪಡಿಸ ಹತ್ತುವವು. ಹೀಗಾಯಿ ತೆಂದರೆ ಇದಕ್ಕೆ ಹಲ್ಲು ಹುಳಿಯೋಣವೆನ್ನುವರು. ಆಗ್ಗೆ ಹಲ್ಲುಗಳು ತುಸು ಚುಚ್ಚ ಹತ್ತುತ್ತವೆ ಆ ಮೇಲೆ ರೋಗ ಜಂತುಗಳು ಹಲ್ಲಿನ ಬೇರಿನವರೆಗೆ ಮುಟ್ಟಲು ಅತ್ಯಂತ ಬಾಧೆಯಾಗಹತ್ತುತ್ತದೆ. ಆಗ ಅದಕ್ಕೆ ಹಲ್ಲುನೋವು ಅನ್ನುವದುಂಟು. ಈ ಹಲ್ಲುನೋವಿನ ಸುದ್ದಿಯನ್ನು ಹಲ್ಲಿನ ಬೇರಿನ ಹತ್ತ ರಿರುವ ಮಜ್ಜಾತಂತುಗಳು ಮಿದುಳಿಗೆ ಒಯ್ದು ಮುಟ್ಟಿಸುವವು. ಇಷ್ಟಾ ದರೂ ಸಹ ದಂತ ಬಾಧೆಯ ಜ್ಞಾನದ ಕಡೆಗೆ ಜನರು ಲಕ್ಷಿಸುವದಿಲ್ಲ ಹೀಗೆ ಹಲ್ಲುಗಳ ವಿಷಯಕ್ಕೆ ಉದಾಶೀನತೆ ತಾಳುವವರಿಂದಲೇ ಜನರು ತೀವ್ರವಾಗಿ ಭಗ್ನದಂತಿಗಳಾಗುವರು. ಹಲ್ಲುಗಳು ಕಳಚಿಹೋದಮೇಲೆ ಮನುಷ್ಯನ ಆರೋಗ್ಯದ ಅರ್ಧಶಕ್ತಿಯು ಕಳೆದುಹೋಗುವದು. ದಂತ ಸ್ವಚ್ಛತೆಯ ಮಹತ್ವವನ್ನು ಕುರಿತು ಆಲಮಟ್ಟಿ ಎಂಬ ಗ್ರಾಮದಲ್ಲಿ ಸ್ಥಾಪಿತ ವಾದ ವೀರಶೈವ ವಿದ್ಯಾಲಯದಲ್ಲಿ ಹೊರಡುವ ಉದ್ಯೋಗವೆಂಬ ಕನ್ನಡ ಮಾಸಿಕದ ತಾ. ೭-೧೦-೧೯೩೦ನೇ ಸಂಚಿಕೆಯಲ್ಲಿ ಬಿ. ಕೆ. ಬಿ. ಎ. ಎಂಬು ವವರು "ಭಾರತೀಯ ವೈದ್ಯರಾಜರು ರೋಗಿಯ ದೇಹಸ್ಥಿತಿಯನ್ನು ಅರಿತು ಕೊಳ್ಳಬೇಕಾದರೆ ಆ ರೋಗಿಯ ನಾಡಿಯನ್ನು ಹೇಗೆ ಪರೀಕ್ಷಿಸಿ ಅತನ ರೋಗವನ್ನು ಗೊತ್ತು ಹಚ್ಚುತ್ತಾರೆಯೋ ಹಾಗೆ ಸದ್ಯಕ್ಕೆ ಅಮೇರಿಕೆಯೊಳ ಗಿನ ವೈದ್ಯ ಪಂಡಿತರು ರೋಗಿಯ ಹಲ್ಲುಗಳನ್ನು ಪರೀಕ್ಷಿಸಿ ಅತನ ದೇಹ ಸ್ಥಿತಿಯನ್ನು ಕಂಡುಕೊಳ್ಳುತ್ತಾರೆಂದು" ಬರೆದಿದ್ದಾರೆ. ಇದರ ಮೇಲಿಂದ ವಿಚಾರಿಸಲಾಗಿ ಹಲ್ಲುಗಳ ಸ್ವಚ್ಛತೆಯ ಮಹತ್ವವು ಎಷ್ಟಿರುವದೆಂಬುವದು ಒಡೆದು ಕಾಣುವದು. ಹಲ್ಲಿನ ಮಹತ್ವವನ್ನರಿಯದೆ ಅಸಂಖ್ಯ ಜನರು ತೀವ್ರ ಭಗ್ನದಂತಿಗಳಾಗಿ ಇತ್ತಿತ್ತಲಾಗಿ ಕೃತ್ರಿಮ ಹಲ್ಲುಗಳನ್ನು ಉಪಯೋಗಿ ಸುತ್ತಿರುವರು. ಕೃತ್ರಿಮ ಹಲ್ಲುಗಳಿಂದ ಊಟವೂ ರುಚಿಸಾಗುವದಿಲ್ಲ. ಯಾಕಂದರೆ ನೈಸರ್ಗಿಕ ಹಲ್ಲುಗಳಿಗೂ ಅವುಗಳ ಮೂಲದಲ್ಲಿರುವ ಪಾಚಕ ರಸವಾಹಿನಿಗಳಿಗೂ ಅತ್ಯಂತ ಸಂಬಂಧವಿರುವದು. ಹಲ್ಲುಗಳು ಅಹಾರ ವನ್ನು ಜಗಿದು ಸಂಣಮಾಡುತ್ತಿರುವಾಗ್ಗೆ ಆ ರಸವು ಆಹಾರದಲ್ಲಿ ಬೆರೆತು ರುಚಿಯಾಗುವದು. ಅದೇ ಅಹಾರವನ್ನು ಕೃತ್ರಿಮ ಹಲ್ಲುಗಳು ಸಂಣಮಾಡು ತ್ತಿರುವಾಗ್ಗೆ ಅಂಥ ರುಚಿಯು ಹುಟ್ಟುವದಿಲ್ಲ. ಯಾಕಂದರೆ ಪಾಚಕರಸ ವಾಹಿನಿಗಳಿಗೂ ಕೃತ್ರಿಮ ಹಲ್ಲುಗಳಿಗೂ ನೈಸರ್ಗಿಕ ಸಂಬಂಧವಿರುವದಿಲ್ಲ.

ಆದ್ದರಿಂದಲೇ "ದಂತ ಹೋದಮೇಲೆ ಅದೆಂತಹ ರುಚಿ." ಎಂದೆನ್ನುವ ಮಾತನ್ನು ಹಲ್ಲು ಕಳೆದುಕೊಂಡ ಅನೇಕ ಜನರಿಂದ ನಾವು ಕೇಳುತ್ತಿದ್ದೇವೆ. ಇದೂ ಅಲ್ಲದೆ ದೇವದತ್ತ ಹಲ್ಲುಗಳನ್ನು ಸುರಕ್ಷಿತವಾಗಿ ಇಟ್ಟುಕೊಳ್ಳದವರು. ಈ ಕೃತ್ರಿಮ ಹಲ್ಲುಗಳನ್ನು ಮೇಲಿಂದ ಮೇಲೆ ತಿಕ್ಕಿ ತೊಳೆದು ಸ್ವಚ್ಛವಾಗಿ ಇಟ್ಟುಕೊಳ್ಳುವ ಭಾರವನ್ನು ಅದೆಷ್ಟು ಪಟ್ಟಿಗೆ ಹೊರುವರೋ ದೇವರೇಬಲ್ಲ. ಕಾರಣ "ಮಿಂಚಿ ಹೋದಮೇಲೆ ಚಿಂತಿಸಿ ಫಲವಿಲ್ಲ" ಎಂಬ ಲೋಕ ನಾಣ್ಣುಡಿಯಂತೆ ಪೂರ್ವದಲ್ಲಿಯೇ ಹಲ್ಲುಗಳ ಮಹತ್ವವನ್ನು ತಿಳಿದು ಅವುಗಳನ್ನು ಬಹು ಜಾಗ್ರತೆಯಿಂದ ಆರೋಗ್ಯಸ್ಥಿತಿಯಲ್ಲಿಟ್ಟುಕೊಳ್ಳಬೇಕು.

## ಹಲ್ಲುಗಳನ್ನು ಸ್ವಚ್ಛವಾಗಿ ಇಡುವ ರೀತಿಯು.

ಹಲ್ಲುಗಳನ್ನು ದಿನಾಲು ಸ್ವಚ್ಛಮಾಡಬೇಕೆಂದು ಕೆಲವರು ಮಟ್ಟೆಯ ಪುಡಿಯಿಂದಲೂ ಉಸುಕಿನಿಂದಲೂ ಇದ್ದಲಿಯ ಮತ್ತು ತಂಬಾಕದ ಕರಕಿನಿಂದಲೂ ಇನ್ನೂ ಕೆಲವರು ಬೇರೆ ಬೇರೆ ಸಾಧನಗಳಿಂದಲೂ ತಿಕ್ಕಿ ಸ್ವಚ್ಛ ಮಾಡುತ್ತಿರುವರು. ಇವುಗಳಲ್ಲಿ ಕೆಲವು ಸಾಧನಗಳಿಂದ ಅಪಾಯ ಸಂಭವಿಸುವದುಂಟು. ಯಾಕಂದರೆ ದಂತಕವಚಗಳು ಸೂಕ್ಷ್ಮವಾಗಿರುವವು. ಈ ಕವಚಕ್ಕೆ ಉರಟುಕಣಗಳುಳ್ಳ ಮಣ್ಣು ಮೊದಲಾದವುಗಳಿಂದ ತಿಕ್ಕಿದರೆ ಬಾಧೆ ತಟ್ಟುವದು. ದಂತಕವಚವು ಸುರಕ್ಷಿತವಾಗಿದ್ದರೇನೇ ದಂತಗಳು ಚನ್ನಾಗಿರುವವು. ಕಾರಣ ದಂತ ಕವಚವನ್ನು ಸುರಕ್ಷಿತವಾಗಿಡುವಂಥ ಸಾಧನಗಳಿಂದ ಹಲ್ಲುಗಳನ್ನು ತಿಕ್ಕಿ ಸ್ವಚ್ಛಮಾಡುವದು ಉತ್ತಮವು. ಆದ್ದರಿಂದ ಆಚಾರನಿಷ್ಠರು ಮೃದುವಾದ ಮತ್ತು ರಸಯುಕ್ತವಾದ ಕಡ್ಡಿಗಳಿಂದ ಹಲ್ಲುಗಳನ್ನು ಉಜ್ಜಿ ಸ್ವಚ್ಛಮಾಡತಕ್ಕದ್ದೆಂದು ಗ್ರಂಥಗಳಲ್ಲಿ ಉಲ್ಲೇಖಿಸಿರುವರು.

ಹಲ್ಲುಗಳ ರಕ್ಷಣೆಗಿದ್ದ ಕೆಂಪು ಕವಚವು ಅತಿ ಮೃದುವಾಗಿರುವದರಿಂದ ಹಲ್ಲು ತಿಕ್ಕತಕ್ಕ ಸಾಧನಗಳಾದರೂ ಮೃದುವಾಗಿರತಕ್ಕದ್ದು. ಮತ್ತು ರಸಯುಕ್ತವೆಂದರೆ ಹಲ್ಲಿನೊಳಗಿನ ಹೊಲಸಿನಿಂದ ಸಂದುಗಳಲ್ಲಿ ಉತ್ಪನ್ನವಾಗುತ್ತಿರುವ ಕ್ರಿಮಿಗಳ ನಾಶಕ್ಕಾಗಿಯೂ ಹಲ್ಲುಗಳ ಭದ್ರತೆಗಾಗಿಯೂ ಸಹಾಯಕವಾದ ರಸದಿಂದ ಕೂಡಿದ ಕಡ್ಡಿಯೆಂದರ್ಥವು. ಕಡ್ಡಿಯಿಂದ ಹಲ್ಲುಗಳನ್ನು ತಿಕ್ಕುತ್ತಿರುವಾಗ್ಗೆ ಘರ್ಷಣೆಯ ಕಾಲಕ್ಕೆ ಕಡ್ಡಿಯೊಳಗೆ

ಹೊರಡುತ್ತಿರುವ ರಸವು ದಂತಕವಚದ ಸಂದಿನೊಳಗಿಂದ ಹಾಯ್ದು ಹಲ್ಲುಗಳ ಬೇರಿಗೆ ಮುಟ್ಟುವದು. ಹಲ್ಲಿನ ಬೇರುಗಳು ಶಿಥಿಲವಾಗಿದ್ದರೆ ಆ ರಸದಿಂದ ಬೇರುಗಳು ಗಟ್ಟಿಯಾಗುವುವು. ಇದು ಅಲ್ಲದೆ ಹಲ್ಲುಗಳ ಬೇರಿನಲ್ಲಿ ಕ್ರಿಮಿಗಳು ಉತ್ಪನ್ನವಾಗಿದ್ದರೆ ಅವೂ ಕೂಡ ನಾಶವಾಗುವವು. ಆದ್ದರಿಂದ ಆರೋಗ್ಯಶಾಸ್ತ್ರದ ವಿಚಾರದಿಂದಲೇ ಆಚಾರ ಗ್ರಂಥದಲ್ಲಿ ಜಾಲಿ, ಬೇವು, ಆಲ, ಉತ್ತರಾಣಿ ಮೊದಲಾದ ಕಡ್ಡಿಗಳಿಂದ ಹಲ್ಲುಗಳನ್ನು ದಿನಾಲು ತಿಕ್ಕುವದು ವಿಹಿತವಾದದ್ದೆಂದು ಬರೆದಿರುವರು. ಜಾಲಿಯ ಗಿಡದ ರಸವು ಹಲ್ಲುಗಳ ಬೇರುಗಳನ್ನು ಗಟ್ಟಿಮಾಡುವವದರಲ್ಲಿ ಬಲವಾದ ಸಾಧನವಾಗಿರುವದು. ಮುಪ್ಪಿನವರ ಹಲ್ಲುಗಳು ಶಿಥಿಲವಾಗಿ ನೋಯ ಹತ್ತಲು ಜಾಲಿಯ ಗಿಡದ ತೊಗಟೆಯನ್ನು ಕುದಿಸಿ ಅದರ ನೀರನ್ನು ಮುಕ್ಕಳಿಸುವದಕ್ಕಾಗಿ ವೈದ್ಯರು ಅವರಿಗೆ ಹೇಳುತ್ತಿರುವರು. ಅದರಂತೆಮಾಡಿ ಎಷ್ಟೋ ಜನರು ಸುಖಿಗಳಾಗಿರುವರು. ಬೇವಿನ ಕಡ್ಡಿಯ ರಸವು ವಿಷಯುಕ್ತನಾದ ಮೂಲಕ ಅದು ದಂತಕವಚದ ಸಂದಿನೊಳಗಿಂದ ಹಲ್ಲುಗಳ ಬೇರಿನ ಮೂಲದ ವರೆಗೂ ಇಳಿದು ಅಲ್ಲಿ ಹುಟ್ಟುತ್ತಿರುವ ಕ್ರಿಮಿಗಳನ್ನು ನಾಶ ಮಾಡುವದು. ಬೇವಿನ ರಸದಲ್ಲಿ ಕ್ರಿಮಿನಾಶಕ ಗುಣವುಂಟು. ಮನುಷ್ಯರಿಗಾಗಲಿ ಇತರ ಪ್ರಾಣಿಗಳಿಗಾಗಲಿ ಪೆಟ್ಟು ತಗಲಿ ನೋವಾದ ಸ್ಥಳದಲ್ಲಿ ಹುಳಗಳು ಹುಟ್ಟಿದ್ದರೆ ಆ ಸ್ಥಳಕ್ಕೆ ಬೇವಿನ ತೊಪ್ಪಲವನ್ನಾಗಲಿ ರಸವನ್ನಾಗಲಿ ಅಥವಾ ಅದರ ಎಂಣೆಯನ್ನಾಗಲಿ ಹಚ್ಚಿ ಆ ಹುಳಗಳನ್ನು ನಾಶಪಡಿಸುವದುಂಟು. ಇದು ಅಲ್ಲದೆ ಆರೋಗ್ಯವನ್ನು ಹಾಳುಮಾಡುವ ಗುಂಗಾಡು ಮೊದಲಾದ ಕ್ರಿಮಿಗಳು ಮನೆಯ ತುಂಬ ವ್ಯಾಪಿಸಿದ್ದರೆ ಅವುಗಳ ನಾಶಕ್ಕಾಗಿ ಬೇವಿನ ತೊಪ್ಪಲದ ಹೊಗೆಯನ್ನು ಹಾಕುತ್ತಿರುವರು. ಮತ್ತು ಬೇವಿನ ಎಂಣೆಯಿಂದ ಮನೆಯೊಳಗೆ ದೀಪವನ್ನು ಹಚ್ಚುತ್ತಾರೆ. ಹೀಗೆ ಮಾಡುವದರಿಂದ ಕ್ರಿಮಿಗಳು ನಾಶವಾದ ಅನುಭವವು ಅಜ್ಞ ಜನರಿಗೂ ಕೂಡ ಇರುವದುಂಟು. ವೈದ್ಯ ಶಾಸ್ತ್ರದಲ್ಲಿ ಬೇವಿನ ಪಂಚಾಂಗವು ಅಂದರೆ ಬೇರು, ತೊಗಟೆ, ಎಲಿ, ಕಾಯಿ, ಹೂವುಗಳು ನಾನಾವಿಧ ರೋಗಗಳಿಗೆ ದಿವ್ಯ ಔಷಧವೆಂದು ವರ್ಣಿಸಲ್ಪಟ್ಟಿರುವದು. ಕುನ್ನೂರಿನ ನ್ಯೂಟ್ರಿಷನ್ ರಿಸರ್ಚಡಾಯರೇಕ್ಟರ ಡಾ. ಎಕ್ರಾಯಿಡ್ ಎಂಬವರು ಮಹಾತ್ಮಾಗಾಂಧೀಜಿಯವರು ಪ್ರಶ್ನಮಾಡಿದಾಗ ಬೇವಿನ ಗಿಡದ ಎಲೆಗಳ ವಿಷಯವಾಗಿ ತಮ್ಮ ಅಭಿಪ್ರಾಯವನ್ನು ಈ ಕೆಳಗೆ

ನಂತೆ ಪ್ರಕಟಿಸಿರುತ್ತಾರೆ. "ನಾವು ನಮ್ಮ ಪ್ರಯೋಗ ಶಾಲೆಯೊಳಗೆ ಬೇವಿನ ಎಲೆಗಳಲ್ಲಿರುವ ಅಂಶಗಳನ್ನು ವಿಭಾಗಿಸಿ ಪರೀಕ್ಷಿಸಿದೆವು. ಈ ವರೆಗೂ ನಾವು ಸಂಶೋಧಿಸಿರುವ ಬೇರೆ ಗಿಡಗಳ ಎಲೆಗಳಲ್ಲಿರುವದಕ್ಕಿಂತಲೂ ಹೆಚ್ಚಾದ ಪೋಷಕತ್ವವು ಬೇವಿನ ಎಲೆಗಳಲ್ಲಿರುವದು. ಇದರ ಹಂಣು, ಹಣ್ಣೆಲೆಗಳಲ್ಲಿ ಪ್ರೊಟಿನ್ನ ಕ್ಯಾಲ್ಸಿಯಂ, ಕಬ್ಬಿಣ ಮತ್ತು ವಿಟಾಮಿನ್ ಎ. ಇವುಗಳು ಸಂಪೂರ್ಣವಾಗಿರುತ್ತವೆ. ಈ ಕಾರಣದಿಂದಲೇ ಬೇವಿನ ಎಲೆ ದಿನಾಲು ನಾವು ತಿನ್ನುವ ಎಲ್ಲ ವಿಧದ ಸೊಪ್ಪುಗಳಿಗಿಂತ ಶ್ರೇಷ್ಠವಾದದ್ದು." ಎಂದು ಬರೆದಿದ್ದಾರೆ. ಇದರ ಬೀಜದಲ್ಲಿ ಮಾರಂಗೋಸಾ (margosa) ಅಥವಾ ಎಂಣೆ ಎಂಬುವದು ಪ್ರಸಿದ್ಧವಾಗಿರುತ್ತದೆ ಇದರ ಎಲೆ ಮತ್ತು ತೊಗಟೆ ಗಳಲ್ಲಿ ಕ್ವಿನೈನಿನಂತಹ ಶಕ್ತಿ ಇರುವದು. ನಿತ್ಯದಲ್ಲಿಯಾಗಲಿ ನಾಲ್ಕು ದಿನಗಳಿಗೊಮ್ಮೆಯಾಗಲಿ ಬರುವ ಜ್ವರ ಹೊಟ್ಟೆಯೊಳಗೆ ಉತ್ಪನ್ನವಾಗುವ ಜಂತುಗಳಿಂದುಂಟಾದ ಜ್ವರ ಅಶಕ್ತತೆ ಹಾಗು ರೋಗನಿವಾರಣಾನಂತರ ಇರುವ ಅಶಕ್ತತೆ ಇವೇ ಮೊದಲಾದ ವಿಕಾರಗಳಿಗೆ ಇದರ ಎಲೆ ತೊಗಟೆಗಳು ವಿಶೇಷ ಗುಣಕಾರಗಳಾಗಿವೆ. ಇದರ ಎಂಣೆಯು ಸಕಲವಿಧ ಚರ್ಮರೋಗ ಗಳಿಗೆ ಪರಮೌಷಧಿಯಾಗಿರುವದು. ಬೇವಿನ ಎಂಣೆಯಲ್ಲಿ ಗಂಧಕವು ವಿಶೇಷವಾಗಿರುವದು. ಇದರಲ್ಲಿ ಸುಂಣವನ್ನಾಗಲಿ ಅಲ್‌ಕಲಿಯನ್ನಾಗಲಿ ಕೂಡಿಸಿದರೆ ಚರ್ಮರೋಗಕ್ಕೆ ಪ್ರಸಿದ್ಧವಾದ ಔಷಧಿಯಾಗುವದೆಂದು ಡಾ. ಆರ್. ಎನ್. ಖೋರಿ ಎಂಬುವವರು ಕಂಡುಹಿಡಿದಿದ್ದಾರೆ. ಮತ್ತು ಡಾ. ಕರ್ಣಿಸ್ ಸಾಹೇಬರು ಹಾಗು ಡಾ. ಮೇಯರಿಂಗ ಸಾಹೇಬರು ಬೇವು ನೂರಾಎಂಟು ರೋಗಗಳನ್ನೆಲ್ಲ ನಾಶಮಾಡುವಷ್ಟು ಬಲವುಳ್ಳ ಗುಣಕಾರಿ ಯಾಗಿರುವದೆಂದೂ ಸ್ಪಷ್ಟವಾಗಿ ಹೇಳಿದ್ದಾರೆ. ಬೇವು, ಜಾಲಿ ಇವುಗಳ ಮುಗುಳಿನಿಂದ ಕಂಣುನೋವು ವಾಸಿಯಾಗುವದು. ಮತ್ತು ಸಕಲ ವೈದ್ಯ ವೃಂದವು ವಸಂತ ಋತುವಿನಲ್ಲಿ ಅಂದರೆ ಚೈತ್ರಮಾಸ ವರ್ಷಾರಂಭದ ಆದಿ ಯೊಳಗೆ ಬೇವಿನ ಹೂವುಗಳು ವಿಶೇಷವಾಗಿ ದೊರೆಯುವವು. ಚೈತ್ರಮಾಸ ಸಂಪೂರ್ಣವಾಗಿ ಇದರ ಹೂವನ್ನು ತಿಂದದ್ದಾದರೆ ಇಡೀ ವರ್ಷಾಂತ್ಯದ ವರೆಗೂ ಜ್ವರದಿಂದ ಮನುಷ್ಯನು ದೂರವಾಗುವನೆಂದು ಅಭಿಪ್ರಾಯಪಡು ತ್ತದೆ. ಈ ಕಾರಣದಿಂದಲೇ ಧಾರ್ಮಿಕರು ಯುಗಾದಿ ಪಾಡ್ಯವೆಂದರೆ ಹೊಸವರ್ಷದ ಮೊದಲನೆಯ ದಿನದಲ್ಲಿ ಬೇವಿನ ಹೂವನ್ನು ಪ್ರತಿಯೊಬ್ಬನೂ

ತಿನ್ನಲೇಬೇಕೆಂದು ಆರೋಗ್ಯ ವಿಧಿಯನ್ನು ಧಾರ್ಮಿಕ ನೇಮವನ್ನಾಗಿ ಜಗದಾದಿಯಿಂದಲೂ ಗೊತ್ತುಮಾಡಿದ್ದಾರೆ. ಇದೇ ಪ್ರಕಾರ ಉತ್ತರಾಣಿ ತೊಪ್ಪಲ ಮತ್ತು ಕಡ್ಡಿಗಳನ್ನು ವೈದ್ಯರು ಅನೇಕ ವಿಧರೋಗಗಳಿಗೆ ಉಪಯೋಗಿಸುತ್ತಿದ್ದಾರೆ. ಇದರ ರಸದಿಂದಲಾದರೂ ಹಲ್ಲುಗಳ ಬೇರುಗಳು ಗಟ್ಟಿಯಾಗುವದುಂಟು. ಇದರಂತೆಯೇ ಎಷ್ಟೋ ವನಸ್ಪತಿಗಳು ಹಲ್ಲುಗಳನ್ನು ಸಂರಕ್ಷಣೆಮಾಡುವದರಲ್ಲಿ ಸಹಾಯಕಾರಿಗಳಾಗಿರುತ್ತವೆ.

ಈ ಸುಧಾರಣಾಕಾಲದೊಳಗೆ ಕೆಲವರು ಬ್ರುಶ್‌ದಿಂದ ಹಲ್ಲುಗಳನ್ನು ಸ್ವಚ್ಛಮಾಡುವದುಂಟು. ತಿಕ್ಕತಕ್ಕ ಪುಡಿಯೂ ಬ್ರುಶದ ಕೂದಲಗಳೂ ಸೂಕ್ಷ್ಮವಾಗಿದ್ದರೆ ಹಲ್ಲುಗಳನ್ನು ತಿಕ್ಕಲು ಉಪಯೋಗಿಸುವದು ಒಳಿತು. ಇಲ್ಲವಾದರೆ ಅದರಿಂದಲಾದರೂ ಅಪಾಯವಾಗುವದುಂಟು. ಬ್ರುಶ್‌ದಿಂದ ಹಲ್ಲುಗಳನ್ನು ಸ್ವಚ್ಛಮಾಡಬಹುದೇ ಹೊರತು ಹಲ್ಲುಗಳ ಬೇರುಗಳನ್ನು ಗಟ್ಟಿಮಾಡಲು ಅದರಿಂದ ಅನುಕೂಲವಾಗುವದಿಲ್ಲ. ಇದನ್ನೆಲ್ಲ ವಿಚಾರಿಸಿ ಮಾನವನಿಗೆ ದಿನಾಲು ಸಹಜವಾಗಿ ದಂತಗಳ ಆರೋಗ್ಯವು ಸಾಧಿಸಲೋಸುಗ ಮೇಲೆ ಹೇಳಿದ ವನಸ್ಪತಿಗಳ ಗುಣಧರ್ಮಗಳನ್ನು ಕಂಡುಹಿಡಿದು ಅವುಗಳನ್ನೆಲ್ಲ ದಂತಸ್ವಚ್ಛತೆಗಾಗಿ ಉಪಯೋಗಿಸಬೇಕೆಂಬ ದೈನಿಕ ಸದಾಚರಣೆಯಲ್ಲಿ ವಿಶ್ವಧರ್ಮಿಗಳು ಧರ್ಮದ ಮೂರನೆಯ ನೇಮವನ್ನಾಗಿ ಗೊತ್ತುಮಾಡಿದ್ದಾರೆ.

# ಪತ್ರಿ ಪುಷ್ಪ ಧೂಪಗಳು



ಭೂಮಿಯು ಮೇಲೆ ಅಸಂಖ್ಯ ಗಿಡಬಳ್ಳಿಗಳು ಬೆಳೆಯುತ್ತಿರುತ್ತವೆ. ಮಾನವನು ವಾಸಿಸುವ ಸ್ಥಳದ ಸುತ್ತುಮುತ್ತಲೂ ಎಷ್ಟೋ ಎಲೆಹೂವುಗಳು ಸಹಜವಾಗಿ ಅವನಿಗೆ ದೊರೆಯುತ್ತವೆ. ಹೀಗಿದ್ದೂ ದೇವತಾ ಪೂಜೆಗಾಗಿ ಅವನು ನಿರ್ದಿಷ್ಟವಾದ ಇಂಥಿಂಥ ಪತ್ರಿ ಪುಷ್ಪಗಳನ್ನೇ ಸಂಗ್ರಹಿಸತಕ್ಕದ್ದೆಂದು ಧಾರ್ಮಿಕರು ಗೊತ್ತುಮಾಡಿದ್ದಾರೆ. ಯಾಕೆಂಬುದರ ರಹಸ್ಯವು ಈ ಕೆಳಗಿನ ಸಂಗತಿಯಿಂದ ಅರಿತುಕೊಳ್ಳಲು ಸಾಧ್ಯವುಂಟು.

ವನಸ್ಪತಿ ಶಾಸ್ತ್ರಜ್ಞರು ವನಸ್ಪತಿಗಳ ಗುಣಧರ್ಮಗಳನ್ನು ಈ ಪ್ರಕಾರವಾಗಿ ಕಂಡುಹಿಡಿದಿದ್ದಾರೆ. ಪ್ರಾಣಿಗಳಿಗೂ ವನಸ್ಪತಿಗಳಿಗೂ ಜೀವನ ಕ್ರಮವು ವ್ಯತ್ಯಾಸವುಂಟು. ಪ್ರಾಣಿಗಳು ಆಕ್ಸಿಜನ್ ( ಪ್ರಾಣವಾಯು ) ವನ್ನು ತಿಂದು ಬದುಕಿದರೆ ವನಸ್ಪತಿಗಳು ಕಾರ್ಬಾನಿಕ ಆಸಿಡ್ ( ಅಂಗಾರಾಮ್ಲ )ವನ್ನು ತಿಂದು ಬದುಕುತ್ತವೆ. ಪ್ರಾಣಿಗಳು ಆಕ್ಸಿಜನ್ನವನ್ನು ತೆಗೆದುಕೊಂಡು ಅಂಗಾರಾಮ್ಲವಾಯುವನ್ನೂ ವನಸ್ಪತಿಗಳು ಅಂಗಾರಾಮ್ಲವನ್ನು ತಿಂದು ಆಕ್ಸಿಜನ್ನವನ್ನೂ ಬಿಡುವದು ಸಹಜ ಗುಣಧರ್ಮವಾಗಿದೆ. ಆದರೆ ವನಸ್ಪತಿಗಳು ಆಕ್ಸಿಜನ್ನವನ್ನೂ ಕೆಲವು ಕಾಲದಲ್ಲಿ ಅಂಗಾರಾಮ್ಲವನ್ನೂ ಬಿಡುವದುಂಟು. ಪ್ರಾಣಿಗಳು ಬಿಡುವ ಅಂಗಾರಾಮ್ಲ ವಾಯುವು ವನಸ್ಪತಿಗಳಿಗೆ ಜೀವನ ಸಹಾಯವಾಗುವದು. ಆದರೆ ವನಸ್ಪತಿಗಳು ಆಕ್ಸಿಜನ್ನೂ ಅಂಗಾರಾಮ್ಲವನ್ನೂ ಬಿಟ್ಟರೂ ಅಂಗಾರಾಮ್ಲವು ಪ್ರಾಣಿಗಳಿಗೆ ಅಪಾಯಕಾರಕವುಂಟು. ಪ್ರಾಣಿಗಳು ತಮ್ಮ ಉಚ್ಛ್ವಾಸದಿಂದ ಬಿಡುವ ಕಾರ್ಬಾನಿಕ್ ಅಶಿಡ್‌ವನ್ನು ವನಸ್ಪತಿಗಳು ತಿಂದು ಆಕ್ಸಿಜನ್ನವನ್ನು ಕೊಡುತ್ತವೆ. ಈ ಆಕ್ಸಿಜನ್ನವೇ ಸಕಲ ಜೀವಿಗಳ ಜೀವನಾಧಾರವು ರಾತ್ರಿಯಲ್ಲಿ ವನಸ್ಪತಿಗಳು ಅಂಗಾರಾಮ್ಲವಾಯುವನ್ನು ಬಿಡುತ್ತವೆ. ಈ ವಾಯುವು ಎಲ್ಲ ಪ್ರಾಣಿಗಳಿಗೂ ಕೇಡನ್ನುಂಟುಮಾಡುತ್ತದೆ. ಆದ್ದರಿಂದಲೇ ಈ ಅಪಾಯಕಾರಕ ಅಂಗಾರಾಮ್ಲ ವಾಯುವಿನ ಸಂಪರ್ಕವು ಪ್ರಾಣಿಗಳಿಗೆ ಇರಕೂಡದೆಂದು ಆರೋಗ್ಯಶಾಸ್ತ್ರಜ್ಞರು ಹೇಳುತ್ತಿರುವರು, ಇದು ನಿಜವು. ಯಾಕಂದರೆ ಹಗೆ

ಮತ್ತು ಅತಿ ತಗ್ಗಿದ್ದಪ್ರದೇಶಗಳಲ್ಲಿ ಆಕ್ಸಿಜನ್ನವಾಯು ಇರದೇ ಕೇವಲ ಅಂಗಾರಾಮ್ಲ ಹವೆಯು ಇರುವದರಿಂದ ಅಂಥ ಸ್ಥಳಗಳಲ್ಲಿ ಪ್ರಾಣಿಯು ಬದುಕಿರಲು ಸಾಧ್ಯವಿಲ್ಲೆಂಬುವದು ಎಲ್ಲರಿಗೂ ಅನುಭವ ಸಂಗತಿಯಾಗಿದೆ. ಕಾರಣ ಅಂಗಾರಾಮ್ಲ ವಾಯುವಿನಿಂದ ಪ್ರಾಣಿಗಳು ದೂರ ಇರುವದು ಒಳಿತು.

ರಾತ್ರಿಕಾಲದಲ್ಲಿ ವನಸ್ಪತಿಗಳಿಂದ ಅಂಗಾರಾಮ್ಲವಾಯು ಯಾವಾಗಲೂ ಹೊರಡುತ್ತಿರುವದರಿಂದ ಆ ಸಮಯದಲ್ಲಿ ಗಿಡಗಳ ಬುಡದಲ್ಲಿ ವಾಸಿಸಬಾರದೆಂದು ವನಸ್ಪತಿ ಶಾಸ್ತ್ರಜ್ಞರು ಹೇಳುತ್ತಾರೆ. ಹೀಗಿದ್ದರೂ ಆಧುನಿಕ ಸುಧಾರಕರು ತಮ್ಮ ತಮ್ಮ ವಾಸಿಸುವ ಗ್ರಹಗಳ ಸುತ್ತುಮುತ್ತಲೂ ಸಂಪಿಗೆ, ಮಲ್ಲಿಗೆ ಮೊದಲಾದ ಗಿಡಬಳ್ಳಿಗಳನ್ನು ಜೋಕೆಮಾಡುತ್ತಾರೆ. ಯಾಕೆ? ಇದರ ಮುಖ್ಯಾಂಶವೇನು? ಇವುಗಳು ರಾತ್ರಿಯ ಸಮಯದಲ್ಲಿ ಅಂಗಾರಾಮ್ಲ ವಾಯುವನ್ನು ಬಿಡುವದಿಲ್ಲವೋ? ಇವುಗಳಿಂದ ಅಪಾಯವಾಗುತ್ತಿದ್ದರೆ ತಮ್ಮ ಸಮೀಪದಲ್ಲಿ ಇವುಗಳನ್ನು ಇಟ್ಟುಕೊಳ್ಳುವ ಕಾರಣವೇನು? ವನಸ್ಪತಿಗಳ ಗುಣಧರ್ಮಗಳನ್ನರಿತ ಜ್ಞಾನಿಗಳೂ ಸಹ ಈ ಬಗೆಯ ಗಿಡಬಳ್ಳಿಗಳನ್ನು ತಮ್ಮ ಬಂಗ್ಲೇದ ಸುತ್ತಮುತ್ತಲೂ ಬೆಳೆಸುತ್ತಿರುವರು. ಇವರು ಅವುಗಳನ್ನು ತಮ್ಮ ಅಂದಕ್ಕಾಗಿ ಬೆಳೆಸುತ್ತಿದ್ದರೆ ಅವುಗಳಿಂದ ಅಪಾಯವಾಗುದೆಂಬ ಜ್ಞಾನವು ಇವರಿಗೆ ಇರುವದಷ್ಟೇ? ಆದರೂ ಇವುಗಳನ್ನು ಯಾಕೆ ಬದಿಯಲ್ಲಿ ಜೋಕೆಮಾಡುತ್ತಿರುವರೆಂಬ ಸಂಶಯಗ್ರಸ್ತ ಪ್ರಶ್ನವು ಎಲ್ಲರಿಗೂ ಹುಟ್ಟುವದು ಸಹಜವಾದದ್ದು.

ಮಾವು, ಬೇವು, ಜಾಲಿ, ಆಲ, ಅರಳೆ ಹುಣಸೆ, ಸಂಪಿಗೆ, ಮಲ್ಲಿಗೆ ಮೊದಲಾದ ಅಸಂಖ್ಯ ವನಸ್ಪತಿಗಳು ಕಂಣಿಗೆ ಕಾಣಿಸುವವು. ಇವೆಲ್ಲವುಗಳು ಭೂಮಿಯಲ್ಲಿಯೇ ಹುಟ್ಟಿ ಬೆಳೆಯುವವು. ಒಂದೇ ನೆಲ, ಜಲಗಳಿಂದ ಬೆಳೆದರೂ ಆಯಾಯ ವನಸ್ಪತಿಗಳ ಅಂತರಿಕ ಮತ್ತು ಬಾಹ್ಯ ರುಚಿ, ಆಕಾರ ಮತ್ತು ವಾಸನೆಗಳು ಭಿನ್ನಭಿನ್ನವಾಗಿರುತ್ತವೆ. ಮಾವಿನ ಗಿಡದ ಆಕಾರದಂತೆ ಬೇವು ಆಲ, ಅರಳೆ, ಮೊದಲಾದ ಗಿಡಗಳು ಇರುವದಿಲ್ಲ. ಅವುಗಳ ಎಲೆ ಹೂವು ಕಾಯಿಗಳು ಬೇರೆಬೇರೆ ಪ್ರಕಾರದವುಗಳಾಗಿರುತ್ತವೆ. ಬಾಳೆ, ಕಿತ್ತಳೆ, ದ್ರಾಕ್ಷೆ ಮೊದಲಾದ ವನಸ್ಪತಿಗಳ ಹಂಣಿನಲ್ಲಿ ಹುಟ್ಟತಕ್ಕ

ರಸ, ರುಚಿಯು ಬೇವು ಮೊದಲಾದ ಹಂಣುಗಳಿಂದ ಹೊರಡುವದಿಲ್ಲ. ಸಂಪಿಗೆ, ಮಲ್ಲಿಗೆ, ಸಾವಂತಿಗೆ, ಗುಲಾಬಿ ಮುಂತಾದ ಹೂವುಗಳಿಂದ ಹೊರಡತಕ್ಕ ಸುವಾಸನೆಯು ಬೇರೆ ವನಸ್ಪತಿಗಳ ಹೂವುಗಳಿಂದ ದೊರೆಯಲಾರದು. ಹೀಗೆ ಪ್ರತಿಯೊಂದು ವನಸ್ಪತಿಗಳ ಬಾಹ್ಯ ಮತ್ತು ಆಂತರಿಕ ಗುಣಧರ್ಮಗಳು ಬೇರೆಬೇರೆಯಾಗಿರುವವೆಂಬುವದು ಅನುಭವಕ್ಕೆ ಬಂದ ಸಂಗತಿಯಾಗಿದೆ. ಇದೂ ಅಲ್ಲದೆ ವನಸ್ಪತಿಗಳ ಕಟ್ಟಿಗೆಯಲ್ಲಿಯು ಜ್ವಲನ ಶಕ್ತಿಯೂ ಹೆಚ್ಚು ಕಡಿಮೆ ಪ್ರಮಾಣದಲ್ಲಿರುವದು. ಎಲ್ಲ ಕಟ್ಟಿಗೆಗಳಿಗಿಂತ ಬನ್ನಿ, ಬಿಲ್ವ, ಶ್ರೀ ಗಂಧ ಮೊದಲಾದ ಕಟ್ಟಿಗೆಯಲ್ಲಿ ಅಗ್ನಿಯು ವಿಶೇಷವಾಗಿರುವದು. ಆದ್ದ ರಿಂದಲೇ ವೈದಿಕರು ಯಜ್ಞಯಾಗಾದಿಗಳಲ್ಲಿ ಅಗ್ನಿಹೋತ್ರವು ಆರಿಹೋಗ ಬಾರದೆಂಬ ಹೇತುವಿನಿಂದ ಈ ವನಸ್ಪತಿಗಳ ಕಟ್ಟಿಗೆಗಳನ್ನು ಉಪಯೋಗಿಸು ತ್ತಿರುವರು. ವನಸ್ಪತಿಗಳೊಳಗಿನ ಜ್ವಲನ ಶಕ್ತಿಯು ಭಿನ್ನವಾಗಿರುವಂತೆ ಅವುಗಳೊಳಗಿನ ವಾಯು ಶಕ್ತಿಯೂ ಸಹ ಭಿನ್ನವಾಗಿರುವದು. ಸಾಮಾನ್ಯ ವಾಗಿ ವನಸ್ಪತಿಗಳು ಹಗಲು ಆಕ್ಸಿಜನ್ನವನ್ನೂ ರಾತ್ರಿಯಲ್ಲಿ ಅಂಗಾರಾಮ್ಲ ವನ್ನು ಬಿಡುವದುಂಟು. ಆದರೆ ಬೇರೆ ಕೆಲವು ಅಂದರೆ ಬಿಲ್ವ, ತುಳಸಿ, ಲಕ್ಕಿ ಶ್ರೀಗಂಧ, ಕಾರಿ ಸಂಪಿಗೆ, ಮಲ್ಲಿಗೆ ಮೊದಲಾದ ವನಸ್ಪತಿಗಳು ವಿಶೇಷವಾಗಿ ಆಕ್ಸಿಜನ್ ವಾಯುವನ್ನೇ ಕೊಡುತ್ತವೆ. ಆದ್ದರಿಂದಲೇ ಇಂಥ ವನಸ್ಪತಿ ಗಳನ್ನು ಜನರು ಇವುಗಳಿಂದ ತಮಗೆ ಹಿತವಾಗಲೇಬೇಕೆಂದು ತಮ್ಮ ಹತ್ತರ ಯಾವಾಗಲೂ ಜೋಕೆ ಮಾಡುವದುಂಟು. ಸನ್ನ ೧೯೧೭ನೇ ಇಸ್ವಿಯಲ್ಲಿ ಕಲಕತ್ತೆಯೊಳಗೆ "ಭೋಸ ಇನ್ಸಿಟ್ಯೂಟ" ಎಂಬ ಸಂಶೋಧನ ಸಂಸ್ಥೆ ಯನ್ನು ಸ್ಥಾಪಿಸಿದ ಕಲಕತ್ತೆಯ ಕಾಲೇಜದ ಪ್ರಾಧ್ಯಾಪಕರಾದ ಸರ ಜಗ ದೀಶ ಚಂದ್ರಭೋಸರು ತಮ್ಮ ಪ್ರಯೋಗ ಶಾಲೆಯಲ್ಲಿ "ವನಸ್ಪತಿಗಳು ನಡುರಾತ್ರಿಯಿಂದ ನಿದ್ರೆಹೋಗಿ ಹಗಲು ಎಂಟು ಗಂಟೆಗೆ ಎಚ್ಚರವಾಗುವ ವೆಂದೂ ಮೇಲೆ ಬರೆದ ಕೆಲವು ವನಸ್ಪತಿಗಳು ವಿಶೇಷ ಆಕ್ಸಿಜನ್ನ ಹವೆಯನ್ನು ಕೊಡುತ್ತವೆಂದೂ, ಹೇಳಿರುತ್ತಾರೆ. ಆದ್ದರಿಂದ ಎಷ್ಟೋ ಜನರು ತಮ್ಮ ಆರೋಗ್ಯವೃದ್ಧಿಗಾಗಿ ಹೆಚ್ಚಾಗಿ ಆಕ್ಸಿಜನ್ನವನ್ನು ಕೊಡತಕ್ಕ ವನಸ್ಪತಿಗಳನ್ನು ಸಮೀಪದಲ್ಲಿ ಇಟ್ಟುಕೊಳ್ಳುತ್ತಾರೆ. ದೇವತಾ ಪೂಜೆಗಾಗಿ ಸಂಗ್ರಹಿಸಲು ಗೊತ್ತುಮಾಡಿದ ವನಸ್ಪತಿಗಳಲ್ಲಿ ಆಕ್ಸಿಜನ್ (ಪ್ರಾಣವಾಯು) ವನ್ನು ಕೊಡುತ್ತವೆ. ಆದ್ದರಿಂದಲೇ ಅವುಗಳನ್ನು ಮಾನವನು ದಿನಾಲು ಸಂಗ್ರಹಿಸ

ಬೇಕೆಂಬ ನಿರ್ಬಂಧವನ್ನು ಧಾರ್ಮಿಕರು ಹಾಕಿದ್ದಾರೆ. ಅಂದರೆ ಎಲ್ಲ ವನಸ್ಪತಿಗಳು ಪ್ರಾಣವಾಯುವನ್ನು ಕೊಡುವದರಿಂದ ಈ ವಾಯುವಿನ ಸಂಪರ್ಕವು ಮನುಷ್ಯನಿಗೆ ಅವಶ್ಯವಾದ ಮೂಲಕ ಮೇಲೆ ಬರೆದ ವನಸ್ಪತಿಗಳ ಸಂಬಂಧವನ್ನು ಧಾರ್ಮಿಕರು ಮಾನವನ ಹಿತಕ್ಕಾಗಿ ಗೊತ್ತು ಮಾಡಿದ್ದಾರೆ.

ಡಾಕ್ಟರ ಆರ್. ಯಸ್. ಖೋರಿ ಇವರು ಮೆಟೇರಿಯಾ ಮೆಡಿಕಾ ಆಫ್ ಇಂಡಿಯಾ ಪೇಜು ೧೯೯ ಇದರಲ್ಲಿ ಈ ಕೆಳಗಿನಂತೆ ಬರೆದಿದ್ದಾರೆ. "ಸಾಮಾನ್ಯವಾಗಿ ಎಲ್ಲ ಬಗೆಯ ಮಗಗಳು ರಾತ್ರಿಯ ಕಾಲದಲ್ಲಿ ಅಂಗಾರಾಮ್ಲವಾಯುವನ್ನು ಹೆಚ್ಚಾಗಿ ಬಿಡುವದು ಸ್ವಾಭಾವಿಕವು. ಈ ಕಾರಣದಿಂದಲೇ "ನಕ್ತಂ ನ ಸೇವೇತದ್ರುಮಂ" ಎಂಬಂತೆ ರಾತ್ರಿ ಸಮಯದಲ್ಲಿ ಮರದ ಕೆಳಗೆ ಮಲಗಬಾರದೆಂದು ಆರೋಗ್ಯಪ್ರದವಾದ ನೀತಿಯನ್ನು ಆಯುರ್ವೇದವು ಬೋಧಿಸುತ್ತದೆ. ಆದರೆ ಈ ಸಿದ್ಧಾಂತವು ಬೇವು, ಬಿಲ್ವ, ತುಲಸಿ, ಲಕ್ಕಿ, ಮಲ್ಲಿಗೆ, ಶ್ರೀಗಂಧ ಮೊದಲಾದವುಗಳಿಗೆ ಸಂಬಂಧಿಸುವದಿಲ್ಲ. ಯಾಕಂದರೆ ರಾತ್ರಿಯಲ್ಲಿ ನೈಟ್ರೋಜನ್ ಗ್ಯಾಸವನ್ನು ಇವು ಹೆಚ್ಚಾಗಿ ಬಿಡುವದಿಲ್ಲ. ಅದ್ದರಿಂದ ರಾತ್ರಿಯಲ್ಲಿಯಾದರೂ ಇವುಗಳಡಿಯಲ್ಲಿ ಮಲಗಬಹುದು ಎಂದು ಸಿದ್ಧಮಾಡಿಕೊಟ್ಟಿದ್ದಾರೆ. ಇದೂ ಅಲ್ಲದೆ ಹೃಷೀಕೇಶದ ಪ್ರಸಿದ್ಧನಾದ ಸಾಧು ಓರ್ವನು "ಮಹಾಕುಷ್ಠರೋಗದ ಮನುಷ್ಯನು ಬೇವು ಮತ್ತು ಬಿಲ್ವ ಮರಗಳ ಬುಡದಲ್ಲಿ ಹಗಲು ರಾತ್ರಿ ಕ್ಷಣಮಾತ್ರವೂ ಬಿಡದೇ ಮೂರು ತಿಂಗಳುಗಳವರೆಗೆ ಮಲಗಿದರೆ ಆತನ ಕುಷ್ಠರೋಗವು ನಿಶ್ಚಯವಾಗಿ ವಾಸಿಯಾಗುವದೆಂದು ಅನುಭವದಿಂದ ಸಿದ್ಧಮಾಡಿ ಕೊಟ್ಟಿದ್ದಾನೆ.

ತುಲಸಿ, ಬಿಲ್ವ ಮೊದಲಾದ ವನಸ್ಪತಿಗಳು ಅನಂತ ಸುಗುಣಗಳಿಂದ ಕೂಡಿದವುಗಳಾಗಿರುವವು. ಅದರಿಂದಲೇ ಅವು ಜನಗಳ ಪ್ರಾಣರಕ್ಷಣೆಯಲ್ಲಿ ದಕ್ಷತೆಯುಳ್ಳವುಗಳಾಗಿ ಜಗತ್ಪೂಜ್ಯಗಳಾಗಿರುವವು. ಇಂಥ ಅಮೌಲ ವನಸ್ಪತಿಗಳಿಂದ ನಮ್ಮ ಭಾರತೀಯರು ಪಾಶ್ಚಿಮಾತ್ಯ ಎಷ್ಟೋ ವೈದ್ಯಶಿರೋಮಣಿಗಳನ್ನೂ ಕೂಡ ದಂಗುಗೊಳಿಸಿದ್ದಾರೆ. ಸನ್ನ ೧೭೦೭ನೇ ಇಸ್ವಿಯಲ್ಲಾದ "ಇಂಪೀರಿಯಲ್ ಮಲೇರಿಯಾ ಕಾನ್ಫರನ್ಸದಲ್ಲಿ ಬಿಲ್ವ, ತುಲಸಿ

ಗಳು ಮಲೇರಿಯಾ ಜ್ವರಕ್ಕೆ ಮಹೌಷಧಿಯಾಗಿರುವವೆಂಬದಾಗಿ ನಿರ್ಧರಿಸಲ್ಪಟ್ಟಿರುವವು. ಡಾಕ್ಟರ ಪೋಲಾನಾ ಮತ್ತು ಲಂಡನಿನ ಇಂಪೀರಿಯಲ್ ಇನ್‌ಸ್ಟಿಟ್ಯೂಟಿನ ಡಾಕ್ಟರ ಮೋಲ್ಡಿಂಗ ಎಂಬ ಪಾಶ್ಚಿಮಾತ್ಯ ವಿದ್ವಾಂಸರು ಬಿಲ್ವ, ತುಲಸಿಗಳಲ್ಲಿ ಒಂದು ವಿಧವಾದ ಎಣ್ಣೆಯುತ್ಪನ್ನವಾಗುವದು, ಅದು ಗಾಳಿಯ ಮೂಲಕ ವ್ಯಾಪಿಸಿ ತನ್ನ ಸುತ್ತಲಿನ ವಾಯುಮಂಡಲವನ್ನು ಶುದ್ಧಗೊಳಿಸುತ್ತದೆ ಎಂದು ಸಿದ್ಧಮಾಡಿದ್ದಾರೆ. ಮತ್ತು ಡಾಕ್ಟರ ಮೇಜಸ ಲೋರಿಯುಸ್ ಎಂಬವರು ತುಲಸಿ, ಬಿಲ್ವಗಳಿಂದ ಹೊರಡುವ ಸುಗಂಧವಾಯುವು ಸೊಳ್ಳೆಗಳನ್ನು ನಾಶಗೊಳಿಸುವದು ಎಂಬ ಅನುಭವವನ್ನು ವ್ಯಕ್ತಮಾಡಿದ್ದಾರೆ. ಬಿಲ್ವವನ್ನು ಮಹಾಮಹಾ ಋಷಿಗಳೂ ವಿದ್ವಾಂಸರೂ ಬಹಳವಾಗಿ ಅಂದರೆ ಮಹಾಫಲವೃಕ್ಷವೆಂದೂ ಶಿವದ್ರುಮವೆಂದೂ ಅತಿ ಮಂಗಲವೆಂದೂ ಕರೆಯುವರಲ್ಲದೆ ಇದರ ಫಲಕ್ಕೆ ಲಕ್ಷ್ಮೀಫಲ, ಸತ್ಯಫಲ, ಸದಾಫಲ, ಶ್ರೀಫಲವೆಂಬದಾಗಿ ಅನೇಕ ಪ್ರಕಾರಗಳಿಂದ ಹೊಗಳಿದ್ದಾರೆ. ಇದರ ಮೇಲಿಂದ ಬಿಲ್ವದ ಮಹತ್ವವು ಕಂಡು ಬರುವದು. ಬಿಲ್ವ ವೃಕ್ಷದ ಮುಳ್ಳಿನ ಸರವನ್ನು ಅಪಸ್ಮಾರ (ಮೂರ್ಛೆ) ರೋಗವುಳ್ಳ ಮನುಷ್ಯನ ಕೊರಳಲ್ಲಿ ಹಾಕಿದರೆ ಆತನ ಮೂರ್ಛೆರೋಗವು ನಿವಾರಣೆಯಾಗುವದೆಂದು ಪ್ರಸಿದ್ಧ ಅನುಭವಿಕರು ಮನಗಂಡಿದ್ದಾರೆ. ಇವರ ಗುಣಧರ್ಮವನ್ನರಿತೇ ನಮ್ಮ ಪೂರ್ವಿಕರು ಭ್ರಮಿಷ್ಠರಾದ ಜನಗಳಿಗೆ ಬಿಲ್ವವೃಕ್ಷದ ಸುತ್ತಲೂ ಪ್ರದಕ್ಷಣೆಯನ್ನುಮಾಡಲು ಹೇಳುತ್ತಾರೆ. ಅದರಂತೆ ಪ್ರಯತ್ನಮಾಡಿ ಎಷ್ಟೋ ರೋಗಿಗಳು ಗುಣಹೊಂದಿದ್ದಾರೆ. ಮತ್ತು ಉದರ ರೋಗದಿಂದ ನರಳುತ್ತಿರುವವರು ಬಿಲ್ವ ಹಣ್ಣಿನ ಮೊರಬ್ಬವನ್ನು ತಿಂದು ತಮ್ಮ ರೋಗವನ್ನು ನಿವಾರಣೆಮಾಡಿಕೊಳ್ಳುವರು. ಕಲಕತ್ತೆಯಲ್ಲಿ ಬಹು ಪ್ರಸಿದ್ಧವಾಗಿರುವ 'ಬೇಥಗಾಡ್' ಎಂಬ ಹೆಸರಿನ ಇಂಗ್ಲಿಷ ಔಷಧಾಲಯದಲ್ಲಿ ಬಿಲ್ವ ಹಣ್ಣಿನ ಚೂರ್ಣವನ್ನು ಪಾಕಮಾಡಿಟ್ಟು ಅನೇಕ ರೋಗಗಳಿಗೆ ಅದನ್ನು ಉಪಯೋಗಿಸುತ್ತಾರೆ. ಆದ್ದರಿಂದಲೇ ವೈದ್ಯಪಂಡಿತರೆಲ್ಲರೂ ತಮ್ಮ ಸಮೀಪದಲ್ಲಿ ಬಿಲ್ವ ವೃಕ್ಷಗಳನ್ನು ಜೋಕೆಮಾಡುತ್ತಿದ್ದಾರೆ. ಧಾರ್ಮಿಕ ರೂಪದಿಂದಲಾದರೂ ಧರ್ಮಜ್ಞರು ಅಲ್ಲಲ್ಲಿ ಬಿಲ್ವವೃಕ್ಷಗಳ ವನವನ್ನು ವಿಪುಲವಾಗಿ ಜೋಕೆಮಾಡಿರುವರು. ಇದರಂತೆ ಇನ್ನುಳಿದ ವನಸ್ಪತಿಗಳಲ್ಲಿಯೂ ವಿಶೇಷಗುಣಗಳುಂಟು. ಅಂದಮೇಲೆ ಆರೋಗ್ಯವೃದ್ಧಿಗಳಾದ ಇಂಥ ವನಸ್ಪತಿಗಳನ್ನು ಮನುಷ್ಯನು ಯಾವಾಗಲೂ

ತನ್ನ ಸಮೀಪದಲ್ಲಿ ಜೋಕೆಮಾಡಿಕೊಳ್ಳುವದು ಹಿತಕರವಾದದ್ದು. ಈ ವನಸ್ಪತಿಗಳಂತೆ ಧೂಪದಿಂದಾದರೂ ಹಿತಕರವುಂಟು. ಜ್ವಲನದಿಂದ ಅಂಗಾರಾಮ್ಲ ವಾಯು ಹುಟ್ಟುವದು. ಯಾವದೇ ಪದಾರ್ಥವನ್ನು ಸುಡುವಾಗ್ಗೆ ಕಾರ್ಬಾನಿಕ್ ಆಸಿಡ್ ಹೊರಡುವದು ಸಹಜವು. ಈ ಹವೆಯಿಂದ ಪ್ರಾಣಿಗೆ ಅಪಾಯವಾಗುವದುಂಟು. ಒಂದು ಹೊಗೆ ತುಂಬಿದ ಕೋಣೆಯೊಳಗೆ ಪ್ರಾಣಿಯನ್ನು ಹಾಕಿ ಕೆಲವು ವೇಳೆ ಬಂದುಮಾಡಿದರೆ ಕೆಲಹೊತ್ತಿನಲ್ಲಿ ಅದಕ್ಕೆ ಅಪಾಯ ಸಂಭವಿಸುವದುಂಟು. ಹೊಗೆಯು ಅಪಾಯಕಾರಕವಷ್ಟೇ! ಬಿಲ್ವ, ಶ್ರೀಗಂಧ ಮೊದಲಾದ ಕಟ್ಟಿಗೆಗಳ ಜ್ವಲನದಿಂದ ಅಂಗಾರಾಮ್ಲವು ಹುಟ್ಟುವದಿಲ್ಲ. ಮತ್ತು ಅವುಗಳ ಬೂದಿಯಿಂದಲಾದರೂ (ಫಾಸ್ಫೆಟ್ಸ ಆಫ್ ಲೈಂ) ಸುಣ್ಣದ ಭಾಗವೂ ಮತ್ತು (ಫಾಸ್ಫೆಟ್ಸ ಆಫ್ ಆಯರ್ನ) ಕಬ್ಬಿಣದ ಭಾಗವೂ ಇರುತ್ತವೆಂದು ಇಂಗ್ಲೀಷ ಡಾಕ್ಟರರು ಪರೀಕ್ಷಿಸಿದ್ದಾರೆ. ಮತ್ತು ಇದರಿಂದ ಕ್ಷಯರೋಗವು ನಾಶವಾಗುವದೆಂದು ಬರೆದಿದ್ದಾರೆ.) ಆದರೆ ಧೂಪದಿಂದ ಹೊರಡುವ ಹೊಗೆಯು ಅನಿಷ್ಟಕಾರಕವಲ್ಲ. ಧೂಪದಿಂದ ಹೊರಡುವ ಹೊಗಯು ಕ್ರಿಮಿನಾಶಕವಾಗಿರುವದು. ಮತ್ತು ಆಕ್ಸಿಜನ್ನವನ್ನು ಕೊಡುವದು. ಅಂತೆಯೇ ಇದರ ಹೊಗೆಯಿಂದ ಹೊರಟ ಸುಗಂಧವಾಸನೆಯು ನಾಶಕದ್ವಾರ ಮನುಷ್ಯನಿಗೆ ಆನಂದವನ್ನುಂಟುಮಾಡುವದು. ಇದು ಪ್ರಾಣಿಗೆ ಹಿತಕಾರಕವಾದದ್ದರಿಂದ ಅಂದರೆ ಇದರಿಂದ ಪ್ರಾಣಿಯ ಆರೋಗ್ಯ ವೃದ್ಧಿಯಾಗುವದರಿಂದ ಧಾರ್ಮಿಕರು ದಿನಾಲು ದೇವತಾಪೂಜೆಗಾಗಿ ಮೇಲೆ ಹೇಳಿದ ಪತ್ರಿ, ಪುಷ್ಪಗಳಂತೆ ಇದನ್ನು ಉಪಯೋಗಿಸಲು ಗೊತ್ತುಮಾಡಿದ್ದಾರೆ.

ಒಟ್ಟಿನ ಮೇಲೆ ಮನುಷ್ಯನು ಯಾವಾಗಲೂ ತನ್ನ ಪ್ರಪಂಚವನ್ನು ಸುಖವಾಗಿ ಸಾಗಿಸಿಕೊಳ್ಳಬೇಕೆಂಬ ಉದ್ದೇಶದಿಂದ ಪ್ರತ್ಯೇಕ ವ್ಯಾಯಾಮಾದಿಗಳನ್ನು ಮಾಡದೆ ಸಹಜವಾಗಿ ಅವನಿಗೆ ಆರೋಗ್ಯವು ಸಾಧಿಸುವದಕ್ಕಾಗಿ ಆಕ್ಸಿಜನ್ನ (ಪ್ರಾಣವಾಯು)ವನ್ನುಂಟುಮಾಡುವ ಮೇಲೆ ಬರೆದ ವನಸ್ಪತಿಗಳನ್ನು ಅವನ ಹತ್ತರ ಇಟ್ಟುಕೊಳ್ಳುವಕ್ಕಾಗಿ ವಿಶ್ವಧರ್ಮದವರು ಅವುಗಳನ್ನು ದಿನಾಲು ಸಂಗ್ರಹಿಸಬೇಕೆಂಬ ಧರ್ಮದ ನಾಲ್ಕನೇ ನೇಮುವನ್ನಾಗಿ ಗೊತ್ತುಮಾಡಿದ್ದಾರೆ.



# ಸ್ನಾನವು.



ಯಂತ್ರವು ಸುಸೂತ್ರವಾಗಿ ಸಾಗಬೇಕಾದರೆ ಅದಕ್ಕೆ ಎಂಣಿ, ಕಟ್ಟಿಗೆ, ನೀರು, ಇದ್ದಲಿ ಮೊದಲಾದ ಜೀನಸುಗಳನ್ನು ಆಗಾಗ್ಗೆ ತಪ್ಪದೇ ಹಾಕ ಬೇಕಾಗುತ್ತದೆ. ಕೆಲವು ಕಾಲದಮೇಲೆ ಹಾಕಿದ ಪದಾರ್ಥಗಳ ಸತ್ವವು ಕಡಿಮೆಯಾಯಿತೆಂದರೆ ಅದು ಮಲಿನ ರೂಪದಿಂದ ಹೊರಗೆ ಬೀಳುತ್ತದೆ. ಮಲಿನ ಪದಾರ್ಥವು ಹೊರಗೆ ಹೋದರೂ ಅದರ ಕೆಲವಂಶವು ಯಂತ್ರದಲ್ಲಿ ಉಳಿದಿದ್ದರೆ ಅದು ಯಂತ್ರವನ್ನು ಕೆಡಸುವದೆಂಬ ಭೀತಿಯಿಂದ ಆ ಮಲಿನ ವನ್ನು ಆಗಾಗ್ಗೆ ಸ್ವಚ್ಛಮಾಡಿ ಮತ್ತೆ ಚಲೋ ಪದಾರ್ಥಗಳನ್ನು ಹಾಕುವ ದುಂಟು. ಹೀಗೆ ಮಾಡುವದರಿಂದ ಆಯಂತ್ರವು ಬಹು ದಿವಸಗಳವರೆಗೂ ನಮ್ಮ ಉಪಯೋಗಕ್ಕೆ ಬರುತ್ತದೆ. ಅದರಂತೆ ಶರೀರವೆಂಬ ಯಂತ್ರವಾದರೂ ಚನ್ನಾಗಿ ಸಾಗಬೇಕಾದರೆ ಅನ್ನ, ನೀರು ಮೊದಲಾದವುಗಳನ್ನು ಅದಕ್ಕೆ ಅತ್ಯವಶ್ಯವಾಗಿ ಹಾಕಬೇಕು. ಇವು ಕೆಲವು ಕಾಲದ ಮೇಲೆ ಮಲಿನ ಗಳಾಗಿ ಶರೀರದಿಂದ ಹೊರಗೆ ಹೊರಟುಬರುತ್ತವೆ. ಈ ಮಲಿನಗಳು ಹೊರಬಿದ್ದುಹೋದರೂ ಇವುಗಳ ಕೆಲವಂಶವಾದರೂ ಶರೀರಕ್ಕೆ ಹತ್ತಿ ಉಳಿಯುವದುಂಟು. ಇದನ್ನು ಸ್ವಚ್ಛವಾಗಿ ತೊಳೆಯದೇ ಬಿಟ್ಟರೆ ಆರೋಗ್ಯವು ಸಾಧಿಸದೆ ದೇಹವು ತೀವ್ರ ನಾಶವಾಗಿ ಹೋಗುತ್ತದೆ.

ಒಂಭತ್ತು ರಂಧ್ರದಿಂದ ಕೂಡಿದ ದೇಹದಿಂದ ಹಗಲಿರುಳು ಮಲಿನವು ಒಂದೇ ಸವನೆ ಹೊರಬೀಳುತ್ತಿರುವದು. ಅಂದರೆ ಬಾಯಿಂದ ಜೊಲ್ಲೆಂತಲೂ, ಕಂಣಿನಿಂದ್ಪಪಿಚ್ಚೆಂತಲೂ, ಕಿವಿಯಿಂದ ಕೂಗಣಿಯೆಂತಲೂ, ಮೂಗಿನಿಂದ ಸುಂಬಳವೆಂತಲೂ, ಪೃಷ್ಠ, ಶಿಶ್ನಗಳಿಂದ ಮಲಮೂತ್ರಗಳೆಂತಲೂ ಹೊರ ಬೀಳುವದಲ್ಲದೆ ವಿಶೇಷ ಶ್ರಮವಾದಾಗ್ಗೆ ಇಡೀ ದೇಹದಿಂದ ಬೆವರೆಂಬ ಮಲಿನವು ಒತ್ತರದಿಂದ ಹೊರಗೆ ಬರುವದು. ಇವೆಲ್ಲವೂ ದುರ್ಗಂಧಗಳುಳ್ಳವು ಗಳಾಗಿರುವವು. ದುರ್ಗಂಧವು ಆರೋಗ್ಯಕ್ಕೆ ಪ್ರತಿಬಂಧಕವಾದದ್ದು. ಈ ದುರ್ಗಂಧ ಮಲಿನವನ್ನು ತೊಳೆದು ಸ್ವಚ್ಛಮಾಡದಿದ್ದರೆ ದೇಹಕ್ಕೆ ಆರೋಗ್ಯ

ತೆಯು ತಿಲಮಾತ್ರವಾದರೂ ಸಾಧಿಸಲಾರದೆಂಬ ಅನುಭವವು ಎಲ್ಲರಿಗೂ ಉಂಟು.

ನಿದ್ರಾಸಮಯದಲ್ಲಿ ಇಂದ್ರಿಯಗಳ ವ್ಯಾಪಾರವು ಜಾಗ್ರತಾವಸ್ಥೆಯಲ್ಲಿರುವಂತೆ ನಡೆಯದಿದ್ದರೂ ಶರೀರದೊಳಗಿನ ಮಲಿನವು ಹೊರಬೀಳುವ ಕ್ರಿಯೆಯು ಒಂದೇಸವನೆ ಭರದಿಂದ ಸಾಗುತ್ತಲೇ ಇರುವದು. ಪ್ರಾತಃಕಾಲದಲ್ಲಿ ಎದ್ದೊಡನೆಯೇ ನಮ್ಮ ಮುಖದಮೇಲೆ ಎಂಣಿಯಂಥ ಹೊಲಸು ಜಿಗಟು ಪದಾರ್ಥವು ಆವರಿಸಿದ್ದು ಕಂಣಿಗೆ ಕಂಡುಬರುವದು. ಮತ್ತು ಕಂಣಿನಿಂದ ಪಿಚ್ಚು, ಬಾಯಿಂದ ದುರ್ವಾಸನೆಯು ಹೊರಡುವವು. ಇದು ಅಸಹ್ಯವಾದದ್ದೆಂದು ನಮಗೆ ಅನಿಸುತ್ತಿರುವದರಿಂದ ಎದ್ದಕೂಡಲೆ ಮುಖವನ್ನೂ ಬಾಯಿಯನ್ನೂ ದಿನಾಲು ನಾವು ತಪ್ಪದೆ ಸ್ವಚ್ಛ ತೊಳೆದುಕೊಳ್ಳುತ್ತೇವೆ. ಮುಖದಮೇಲೆ ಆವರಿಸಿದಂಥ ದುರ್ಗಂಧ ಜಿಗಟು ಪದಾರ್ಥವು ದೇಹವೆಲ್ಲವನ್ನೂ ಆವರಿಸಿರುತ್ತದೆ. ಎದ್ದೊಡನೆಯೇ ಮುಖವನ್ನು ತೊಳೆದುಕೊಳ್ಳದಿದ್ದರೆ ನಮ್ಮ ಮನಸ್ಸಿಗೆ ಹ್ಯಾಗೆ ಆನಂದವೆನಿಸುವದಿಲ್ಲವೋ ಹಾಗೆಯೆ ಇಡೀ ದೇಹವನ್ನು ದಿನಾಲು ತೊಳೆದು ಸ್ವಚ್ಛಮಾಡಿಕೊಳ್ಳಲೇಬೇಕೆಂಬ ಕಟ್ಟಳೆಯನ್ನು ಮನಸ್ಸಿನಲ್ಲಿ ಮಾಡಿಕೊಂಡರೆ ದಿನಾಲು ದೇಹವನ್ನೆಲ್ಲ ತೊಳೆದು ಸ್ವಚ್ಛಮಾಡಿಕೊಳ್ಳದ ಹೊರತು ನಮಗೆ ಆರಾಮವೆನಿಸುವದಿಲ್ಲ. ಕೈಕಾಲು ಮುಖಗಳು ಜನರ ಕಂಣಿಗೆ ಕಾಣಿಸುವ ಅವಯವಗಳಾದ್ದರಿಂದ ಅವುಗಳಿಗೆ ಅಂಟಿಕೊಂಡಿದ್ದ ಮಲಿನವನ್ನು ತೊಳೆದು ಅಂದವಾಗಿ ಕಾಣುವಂತೆ ಮಾಡಲು ನಾವು ಹೇಗೆ ಪ್ರಯತ್ನಿಸುವೆವೋ ಹಾಗೆಯೆ ಶರೀರವನ್ನೆಲ್ಲ ತೊಳೆದು ಆರೋಗ್ಯವಾಗಿಡಲು ಪ್ರಯತ್ನಿಸುವದು ಪ್ರತಿಯೊಬ್ಬನ ಆದ್ಯ ಕರ್ತವ್ಯವಾಗಿದೆ.

ದೇಹವು ಸೂಕ್ಷ್ಮರಂಧ್ರಮಯವಾಗಿದೆ. ಒಂದು ರೂಪಾಯಿಯಷ್ಟು ದುಂಡಳತೆಯಲ್ಲಿ ಎರಡುಸಾವಿರ ತೂತುಗಳುಂಟೆಂದು ಆರೋಗ್ಯ ಶಾಸ್ತ್ರಜ್ಞರು ಹೇಳುತ್ತಾರೆ. ಈ ರಂಧ್ರಗಳಿಂದ ಮೈಯೊಳಗಿನ ಹೊಲಸು ಯಾವಾಗಲೂ ಬೆವರಿನ ರೂಪದಿಂದ ಹೊರಗೆ ಬರುತ್ತಿರುತ್ತದೆ. ಬೆವರೆಂದರೆ ಬರೇ ನೀರು ಮಾತ್ರವಲ್ಲ. ಶರೀರದೊಳಗಿನ ಮಲಿನವು ಅದರಲ್ಲಿ ಬೆರೆತಿರುವದು.

ಆದರಿಂದಲೇ ಬೆವರಿಗೆ ದುರ್ಗಂಧವಾಸನೆಯುಂಟಾಗುವದು. ದೇಹ ದೊಳಗಿಂದ ಬೆವರು ಹೊರಬಿದ್ದಕೂಡಲೆ ಮೈಯನ್ನು ತಿಕ್ಕಿಕೊಳ್ಳ ಬೇಕು. ತಿಕ್ಕೋಣದರಿಂದ ಬೆವರಿನಲ್ಲಿಯ ನೀರು ಆರಿಹೋಯಿತೆಂದರೆ ಮೈಯೊಳಗಿನ ಮಣ್ಣು ಗುಳಿಗೆಯಾಗತೊಡಗುವದು. ಬೆವರಿನ ಕೂಡ ಕೂಡಿದ ಈ ಮಲಿನವು ಬೆವರಿನೊಡನೆ ಜಿಗುಟಾಗಿ ದೇಹದ ತುಂಬೆಲ್ಲ ಇರುವ ರಂಧ್ರಗಳ ಬಾಯಿಗೆ ಗಟ್ಟಿಯಾಗಿ ಅಂಟಿಕೊಳ್ಳುವದು. ಅದು ಬಿಗಿಯಾಗಿ ತೂತುಗಳ ಬಾಯಿಗೆ ಒಮ್ಮೆ ಹತ್ತಿಕೊಂಡು ಕೂತಿತೆಂದರೆ ಪುನಃ ದೇಹ ದೊಳಗಿನ ಮಲಿನಕ್ಕೆ ದೇಹದಿಂದ ಹೊರಗೆಬರಲು ಮಾರ್ಗಕೊಡುವದಿಲ್ಲ. ಹೀಗಾಯಿತೆಂದರೆ ಮಲಿನವು ರಕ್ತದೊಳಗೆ ಕೂಡಿ ರಕ್ತವನ್ನು ಕೆಡಿಸತೊಡ ಗುವದು. ಮಲಿನಯುಕ್ತ ರಕ್ತವು ದೇಹದತುಂಬ ವ್ಯಾಪಿಸಲು ಅನೇಕ ವಿಧದ ಕಜ್ಜಿಗಳುಂಟಾಗಿ ದೇಹವು ರೋಗದ ತವರುಮನೆಯಾಗುವದು. ಹುರುಕು ಮೊದಲಾದ ಚರ್ಮರೋಗಗಳು ಹುಟ್ಟಲಿಕ್ಕೆ ಸ್ವಚ್ಛವಾಗಿ ದೇಹ ವನ್ನು ತೊಳೆಯದಿರುವದೇ ಕಾರಣವು. ಸ್ನಾನಮಾಡುವದರಿಂದ ದೇಹದ ಸೂಕ್ಷ್ಮರಂಧ್ರಗಳಿಗೆ ಅಂಟಿಕೊಂಡ ಹೊಲಸು ತೊಳೆದು ಹೋಗಿ ಶರೀರ ಕ್ರಿಯೆಗೆ ಏನೂ ಆತಂಕಬಾರದೆ ದೇಹವು ಆರೋಗ್ಯಮಯವೂ ಪುಷ್ಟವೂ ಆಗುವದರಲ್ಲಿ ಏನೂ ಸಂಶಯವಿಲ್ಲ.

ಬೇಸಿಗೆಯ ಕಾಲದಲ್ಲಿ ಶ್ರಮದ ಕೆಲಸಗಳನ್ನು ಮಾಡುವದರಿಂದ ಬೆವರು ವಿಶೇಷವಾಗಿ ದೇಹದಿಂದ ಹೊರಹೊರಡುವದು. ಆಗ್ಗೆ ಬೆವರಿನಲ್ಲಿ ಕೂಡಿರುವ ದುರ್ಗಂಧವಾಸನೆಯು ನಮಗೆ ಮೇಲಿಂದಮೇಲೆ ಕಂಡು ಬರುವದು. ಈ ಮಲಿನವನ್ನು ತಪ್ಪದೆ ಆಗಾಗ್ಗೆ ಸ್ವಚ್ಛವಾಗಿ ತೊಳೆಯದಿದ್ದಲ್ಲಿ ಆರೋಗ್ಯಕ್ಕೆ ಪ್ರತಿಕೂಲವಾಗುವದು. ಬೇಸಿಗೆಯಸಮಯದಲ್ಲಿ ಸಹಜವಾಗಿ ಮೇಲಿಂದಮೇಲೆ ದೇಹದಿಂದ ಬೆವರು ಹೊರಡುವದು. ದೇಹವು ಜಿಗುಟಾದ ಬೆವರಿನಿಂದ ಕೂಡಿ ಹೊಲಸುನಾರಹತ್ತುವದು. ಆ ಕೂಡಲೇ ಕೆಲವರು ಆಗಾಗ್ಗೆ ಸ್ನಾನಮಾಡುವದುಂಟು. ಆ ಕಾಲಕ್ಕೆ ಅವರಿಗೆ ಆರಾಮವೆನಿ ಸುವದು. ಆದ್ದರಿಂದಲೇ ಯಾವಕಾಲದಲ್ಲಿಯಾದರೂ ಸ್ನಾನದಿಂದ ಶರೀರ ವನ್ನು ಸ್ವಚ್ಛವಾಗಿಟ್ಟುಕೊಳ್ಳುವದು ಯೋಗ್ಯವಾದದ್ದು. ಮನುಷ್ಯನು ದಿನಕ್ಕೆ ಎರಡುಸಾರೆ ಅಂದರೆ ಮುಂಜಾನೆ ಮತ್ತು ಸಾಯಂಕಾಲಗಳಲ್ಲಿ

ಸ್ನಾನಮಾಡತಕ್ಕದ್ದು. ಇಲ್ಲವೆ ಮುಂಜಾನೆ ಒಂದು ಸಾರೆಯಾದರೂ ದಿನಾಲು ತಪ್ಪದೆ ಪ್ರತಿಯೊಬ್ಬನು ಸ್ನಾನದಿಂದ ಶರೀರವನ್ನೆಲ್ಲ ತೊಳೆಯತಕ್ಕದ್ದು. ಹೀಗೆಮಾಡುವದರಿಂದ ದೇಹವು ಶುಚಿಯಾಗಿ ಆರೋಗ್ಯವುಳ್ಳವನಾಗುತ್ತಾನೆ.

ಆರೋಗ್ಯಕ್ಕೆ ಶುಚಿಯೇ ಮೂಲವು. ಶರೀರದೊಳಗೆ ಅಸ್ವಸ್ಥತೆ ಯುಂಟಾಗಬೇಕಾದರೆ ನಾವು ಸೃಷ್ಟಿಯನೇಮುಗಳನ್ನು ಮೀರಿರುವೆವೆಂದು ತಿಳಿದುಕೊಳ್ಳಬೇಕು. ಸೃಷ್ಟಿಯನೇಮವೆಂದರೆ ದೇವರ ಆಜ್ಞೆಯು. ಪ್ರತಿ ಪ್ರಾಣಿಯಜೀವವು ದೇವರ ಅಂಶವಾಗಿದ್ದು ಅದು ಒಂದು ದೇಹದಿಂದ ಆಚ್ಛಾದಿತವಾಗಿರುವದು. ಇದರಿಂದ ಸೃಷ್ಟಿಯನೇಮಕ್ಕೆ ಒಳಗಾಗಿರುವದೇ ಈಶ ಸಂಕಲ್ಪವಿದ್ದಂತೆ ತೋರುವದು. ಬಾಹ್ಯ ಆವರಣವನ್ನು ಹರಿದು ತನ್ನ ನಿಜವನ್ನು ತಾನು ಅರಿಯಬೇಕಾದರೆ ಮನವು ಶುಚಿಯಾಗಿರಬೇಕು. ದೇಹವು ಸ್ವಚ್ಛವಾಗಿದ್ದು ನಿರೋಗಿಯಾಗಿದ್ದರೆ ಮನವು ಶುಚಿಯಾಗಿರುವದು. ದೇಹಕ್ಕೆ ಆವರಿಸುತ್ತಿರುವ ಮಲಿನವು ದೂರಾಗಬೇಕಾದರೆ ಸ್ನಾನವೇ ಮೂಲವು. ಆದ್ದರಿಂದ ಮಾನವನು ತನ್ನ ಕರ್ತವ್ಯಕರ್ಮವಾದ ಸ್ನಾನವನ್ನು ದಿನಾಲು ಮಾಡಿ ಶುಚಿರ್ಭೂತನಾಗಬೇಕೆಂದು ಪೂರ್ವಿಕರು ಶುಚಿಯನ್ನು ಧರ್ಮತತ್ವದಲ್ಲಿ ಅಡಕಮಾಡಿ ಸ್ನಾನವನ್ನು ನಿತ್ಯಾಚರಣೆಯಲ್ಲಿ ಒಂದನ್ನಾಗಿ ಮಾಡಿದ್ದಾರೆ. "ನೈರ್ಮಲ್ಯಂಭಾವಶುದ್ಧಿಶ್ಚ ವಿನಾಸ್ನಾನಂ ನಜಾಯತೇ ತಸ್ಮಾನ್ಮನೋವಿಶುದ್ಧ್ಯರ್ಥಂ ಸ್ನಾನಮಾದೌವಿಧೀಯತೆ" (ಪದ್ಮಪುರಾಣ) ಮತ್ತು "ಸ್ನಾತ್ವಾದ್ವಿವಾರಂ ಶಿವಮರ್ಚಯಿಷ್ಯನ್ । ಭುಂಜೀತ ನೋಚೇನ್ನರಕಂ ಪ್ರಯಾತಿ." ಎಂದು ಭಾರತೀಯ ಧರ್ಮಜ್ಞರು ಮಾನವನು ತಾನು ಆಚರಿಸತಕ್ಕ ಕಾರ್ಯಗಳಲ್ಲಿ ತನ್ನಮನಸ್ಸನ್ನು ಶುದ್ಧವಾಗಿರಿಸಿಕೊಳ್ಳಬೇಕಾದರೆ ಆತನು ಮನಶುದ್ಧಿಗಾಗಿ ಸ್ನಾನವನ್ನು ತಪ್ಪದೆ ಮಾಡತಕ್ಕದ್ದು ಎಂಬುದಾಗಿ ಧಾರ್ಮಿಕ ವಿಧಿರೂಪದಿಂದ ಅವನಿಗೆ ಸ್ನಾನವನ್ನು ಗೊತ್ತುಮಾಡಿದ್ದಾರೆ. ಯಾಕಂದರೆ ಹಿಂದುಗಳು ಧಾರ್ಮಿಕರು. ಹಿತಕರವಾದ ಯಾವದೊಂದು ಆಚರಣೆಯನ್ನು ಧರ್ಮರೂಪದಿಂದ ಬೋಧಿಸಿದರೆ ಜನರು ಅದನ್ನು ಬಹುಶ್ರದ್ಧೆಯಿಂದಲೂ ಪ್ರಯತ್ನದಿಂದಲೂ ಪಾಲಿಸಲು ದ್ಯುಕ್ತರಾಗುವರೆಂಬುವದನ್ನು ತಿಳಿದು ಸ್ನಾನವನ್ನು ಧರ್ಮದ ಪ್ರತಿಯೊಂದು ಕಾರ್ಯದಲ್ಲಿಯೂ ಆಚರಿಸಲೇಬೇಕೆಂದು ಧಾರ್ಮಿಕರು ವಿಧಿಸಿದ್ದಾರೆ.

" ಪವಿತ್ರಂವೃಷ್ಯಮಾಯುಷ್ಯಂ ಶ್ರಮಸ್ವೇದಮಲಾಪಹಂ | ಶರೀರಬಲ ಸಂಧಾನಂ ಸ್ನಾನಮೋಜಸ್ಕರಂಪರಂ|| ಅಂದರೆ ಸ್ನಾನವು ಶ್ರಮದಿಂದುಂಟಾದ ದೇಹದ ದಣುವನ್ನೂ ಬೆವರು ಮೊದಲಾದ ಹೊಲಸನ್ನೂ ನಾಶಗೊಳಿಸಿ ದೇಹದೊಳಗೆ ಬಲ ಮತ್ತು ವರ್ಣಗಳನ್ನು ಹೆಚ್ಚಿಸಿ ವೀರ್ಯ ಮತ್ತು ಆಯುಷ್ಯ ವನ್ನು ವೃಧ್ಧಿಗೊಳಿಸುತ್ತದೆ. ಶರೀರದಲ್ಲಿ ಉಂಟಾದ ಅತಿ ಉಷ್ಣತೆ ಆಲಸ್ಯ ಗಳನ್ನು ದೂರಮಾಡುತ್ತದೆ. ಮನಸ್ಸಿನಲ್ಲಿ ಆನಂದವನ್ನೂ ಸ್ಥಿರತೆಯನ್ನೂ ಹುಟ್ಟಿಸುತ್ತದೆ. ದುಃಸ್ವಪ್ನಗಳು ದೂರಾಗುವವು. ಬುದ್ಧಿಯು ಸೂಕ್ಷ್ಮವಾಗು ವದು. ನರಗಳು ಬಲಪಡುವವು. ರಕ್ತವು ಶುದ್ಧಗೊಳ್ಳುವದು. ಪೌರುಷ್ಯವು ವೃದ್ಧಿಗೊಳ್ಳುವದು. ಈ ಪ್ರಕಾರ ಸ್ನಾನದಿಂದ ಅನೇಕ ಗುಣಗಳುಂಟೆಂದು ಆರೋಗ್ಯಶಾಸ್ತ್ರಕಾರರು ಹೇಳಿರುತ್ತಾರೆ.

ಧಾರ್ಮಿಕ ತಿರುಳನ್ನರಿಯದ ಕೆಲವರು ಧರ್ಮಾಚರಣೆಯಿಂದ ನಡೆ ಯುವೆವೆಂದು ತಿಳಿದುಕೊಂಡವರು ವಿಶೇಷವಾಗಿ ಸ್ನಾನದಲ್ಲಿಯೇ ಕಾಲ ವನ್ನು ಕಳೆಯುವರು. ಅಂದರೆ ಎರಡು ಮೂರು ಹಂಡೇದಂಥ ನೀರುತುಂಬಿದ ದೊಡ್ಡ ಪಾತ್ರೆಗಳೊಳಗಿನ ನೀರನ್ನೆಲ್ಲ ಒಂದೇ ಸವನೆ ಸುರುವಿಕೊಳ್ಳುವರು. ಕೆಲವರ ಸ್ನಾನದ ರೀತಿಯಂತೂ ಅತಿ ವಿಚಿತ್ರವಾಗಿರುವದು. ಶರೀರದ ಒಂದುಭಾಗವು ನೀರಿನಿಂದ ತೊಯ್ದಿದ್ದರೆ ಮತ್ತೊಂದುಭಾಗಕ್ಕೆ ನೀರಿನ ಭೆಟ್ಟಿಯೇ ಇರುವದಿಲ್ಲ. ಮೈಮೇಲಿನ ಬಟ್ಟೆಯು ಒಂದೊಂದು ಕಡೆಗೆ ನೀರು ಮುಟ್ಟದೆ ಹಾಗೇ ಉಳಿಯುವದು. ಅಷ್ಟರಲ್ಲಿಯೇ ಅವರ ಸ್ನಾನದ ವಿಧಿಯು ಸಂಪೂರ್ಣವಾಗುವದು. ಬೇರೆ ಕೆಲವರು ಹಾಗೂಹೀಗೂ ಅರಿವೆ ಗಳನ್ನೂ ದೇಹವನ್ನೂ ನೀರಿನಿಂದ ತೋಯಿಸಿಕೊಂಡು ಮಡಿಯಾದೆವೆಂದು ತಿಳಿದುಕೊಳ್ಳುವದುಂಟು. ದೇಹದಿಂದ ಹೊರಟಮಲಿನವನ್ನು ನೀರು ಹಣಿಸಿ ತಿಕ್ಕಿತೊಳೆದು ಸ್ವಚ್ಛಮಾಡುವದೇ ಸ್ನಾನದ ಉದ್ದೇಶವೆಂಬುವ ಮಹತ್ತರ ವಿಚಾರವು ಅವರಲ್ಲಿ ಇರುವದೇಇಲ್ಲ. ಇನ್ನು ನೂತನವಾತಾವರಣಿಗಳಾದ ಕೆಲವರು ದಿನಾಲು ಸ್ನಾನಮಾಡುವದರಲ್ಲಿ ಏನೂ ಅರ್ಥವಿಲ್ಲ. ಅನುಕೂಲ ವಾದಾಗ ದೇಹದಮಲಿನವನ್ನು ತೊಳೆದು ಸ್ವಚ್ಛಮಾಡಿದರಾಯಿತು. ಎಂದು ನಾಲ್ಕುದಿವಸಕ್ಕೊಮ್ಮೆ ಸ್ನಾನಮಾಡುವದುಂಟು. ಹೀಗೆ ಮಾಡುವದು ಸರಿಯಲ್ಲ. ಯಾಕಂದರೆ ಹಗಲಿರುಳು ಇಂದ್ರಿಯಗಳ ವ್ಯಾಪಾರವು ಒಂದೇ

ಸವನೇ ನಡೆದು ದೇಹದೊಳಗಿನ ಮಲಿನವು ದಿನಾಲು ಹೊರಗೆ ಬರುವದುಂಟು. ಆ ಮಲಿನವನ್ನು ದಿನಾಲು ಸ್ನಾನಮಾಡಿ ತೊಳೆಯದೇ ಹಾಗೆಯೇ ಸ್ವಚ್ಛ ಮಾಡಿದ ಅರಿವೆಗಳನ್ನು ಧರಿಸಿಕೊಂಡು ಅಡ್ಡಾಡುವದರಿಂದ ದೇಹದಿಂದ ಹೊರಟ ಹೊಲಸು ದೇಹದ ಹೊರಭಾಗಕ್ಕೆ ಅಂಟಿಕೊಳ್ಳುವದಲ್ಲದೆ ಹಾಕಿಕೊಂಡ ಸ್ವಚ್ಛಅರಿವೆಗೆ ತೀವ್ರವಾಗಿ ಹತ್ತುವದು. ಹೀಗೆ ಮೇಲಿಂದಮೇಲೆ ಮಾಡಹತ್ತಲು ದೇಹದ ಆರೋಗ್ಯವು ಕೆಟ್ಟುಹೋಗುವದು. ಇವರು ಪಾಶ್ಚಮಾತ್ಯ-ವ್ಯವಹಾರ-ನಿರೀಕ್ಷಣೆಯಿಂದ ಸ್ನಾನದ ತಿರುಳನ್ನರಿಯದಿದ್ದರೂ ಜಪಾನಿಯರ ಸ್ನಾನದ ಮರ್ಮವನ್ನು ಚನ್ನಾಗಿ ಪರಿಶೀಲಿಸಿಕೊಳ್ಳಬೇಕು. ಜಪಾನಿ ಜನರು ದಿನಾಲು ಎರಡು ವೇಳೆ ಸ್ನಾನಮಾಡುವರು. ಬೇಸಿಗೆಯ ಕಾಲದಲ್ಲಿ ನಿತ್ಯವೂ ನಾಲ್ಕುಸಾರೆ ದೇಹವನ್ನು ಸ್ವಚ್ಛಮಾಡುವರು. ಸ್ನಾನಕ್ಕಾಗಿ ಅವರ ದೇಶದಲ್ಲಿ ಸಾರ್ವಜನಿಕ ಸ್ನಾನಮಂದಿರಗಳು ಅಸಂಖ್ಯವಾಗಿರುವವೆಂಬುವದಾಗಿ ಧಾರವಾಡದಲ್ಲಿ ಹೊರಡುವ ಶಕೆ ೧೮೩೩ ನೇ ವೈಶಾಖ ಧರ್ಮತರಂಗಿಣಿಯ ಮಾಸಸಂಚಿಕೆಯವರು ಪ್ರಕಟಿಸಿದ್ದಾರೆ. ಇದನ್ನು ವಿಚಾರಿಸಲಾಗಿ ಪರಕೀಯರಲ್ಲಿಯೂ ಸಹ ಸ್ನಾನದ ಮಹತ್ವವು ಅತಿಶಯವಾಗಿರುವದೆಂಬುದಾಗಿ ಕಂಡುಬರುವದು.

ಕೆಲವರು ದೇಹದ ಸಂಪೂರ್ಣ ಭಾಗಗಳನ್ನು ತೊಳೆಯದೆ ಮಸ್ತಕವನ್ನು ಬಿಟ್ಟು ಉಳಿದ ಭಾಗಗಳನ್ನೆಲ್ಲ ನೀರಿನಿಂದ ತೊಳೆಯುವದುಂಟು. ಇದೂ ಸಹ ಒಳಿತಲ್ಲ. ರಾತ್ರಿಯಲ್ಲಿ ಇಂದ್ರಿಯಗಳ ವ್ಯಾಪಾರ ಸರಿಯಾಗಿ ನಡೆದು ದೇಹವೆಲ್ಲ ಉಷ್ಣವಾಗಿರುವದು. ಇಂಥ ಸಮಯದಲ್ಲಿ ತಲೆಯನ್ನು ಬಿಟ್ಟು ದೇಹದ ಉಳಿದ ಭಾಗಗಳನ್ನು ನೀರಿನಿಂದ ತೊಳೆಯಲು ತೊಯ್ದ ಭಾಗವು ಒಮ್ಮಿಂದೊಮ್ಮೆ ತಂಪಾಗಿ ಅದರ ಉಷ್ಣತೆಯೆಲ್ಲ ಉಳಿದ ಭಾಗದಲ್ಲಿ ನೇರಿ ಅಲ್ಲಿ ಅತೀ ಉಷ್ಣವಾಗುವದುಂಟು. ಹೀಗಾಯಿತೆಂದರೆ ಆ ಭಾಗದಲ್ಲಿ ಶೀತೋಷ್ಣತೆಯ ಅಳತೆಯು ತಪ್ಪಿ, ಉರಿಗಂಣು, ತಲೆನೋವು ಇತ್ಯಾದಿ ರೋಗಗಳು ತೀವ್ರವಾಗಿ ಹುಟ್ಟುವದುಂಟು. ಉದಾಹರಣಾರ್ಥವಾಗಿ ಒಂದು ಕಾಯ್ದ ಕಬ್ಬಿಣದ ತುಂಡಿನ ಮೇಲೆ ಕೆಲವು ಭಾಗಕ್ಕೆ ನೀರನ್ನು ಹಣಿಸಿ ನೋಡಲು ನೀರು ಹಣಿಸಿದ ಭಾಗಕ್ಕೂ ಉಳಿದ ಕಾಯ್ದಿದ್ದ ಭಾಗಕ್ಕೂ ಹೆಚ್ಚು ಕಡಿಮೆಯಾಗುವದುಂಟು. ಅಂದರೆ ನೀರು ಹಣಿಸಿದ ಭಾಗದಲ್ಲಿ ಉಷ್ಣತೆಯೊಡನೆ ನೀರುಕೂಡಿ ಒಂದು ತರಹದ ಕ್ರಿಯೆಯುಂಟಾಗುವದು. ಉಳಿದ

ಭಾಗವು ನಿಷ್ಕ್ರಿಯೆಯಾಗಿರುವದು. ಇದು ಸರ್ವರ ಅನುಭವವೇ ಸರಿ. ಕಾರಣ ಮನುಷ್ಯನು ಯಾವಾಗಲೂ ದೇಹವನ್ನೆಲ್ಲ ನೀರಿನಿಂದ ತೊಳೆದು ಸ್ವಚ್ಛಮಾಡುವದು ಒಳಿತವಾದದ್ದು.

ದಿನಾಲು ತಣ್ಣೀರಿನಿಂದ ಸ್ನಾನಮಾಡುವದು ಉತ್ತಮವಾದದ್ದು. ಇನ್ನು ಕೆಲವರಿಗೆ (ಅಶಕ್ತರಿಗೆ) ತಣ್ಣೀರಿನ ಸ್ನಾನವು ತ್ರಾಸವಾಗುವಂತಿದ್ದರೆ ತುಸು ಬಿಸಿನೀರಿನಿಂದ ಸ್ನಾನಮಾಡುವದು ನೆಟ್ಟಗೆ. ದೇಹದ ಚರ್ಮಕ್ಕೆ ತಣ್ಣೀರಿನ ಸ್ಪರ್ಶವಾದೊಡನೆಯೇ ಹೃದಯ, ಮಿದುಳು, ರಕ್ತಾಶಯ, ಪುಪ್ಪುಸ, ಯಕೃತ್, ಮೂತ್ರಪಿಂಡು ಮೊದಲಾದ ಆಂತರಿಕ ಅವಯವಗಳು ಚಟವಟಿಕೆಯುಳ್ಳವುಗಳಾಗುತ್ತವೆ. ದೇಹದ ತುಂಬೆಲ್ಲ ಚೈತನ್ಯವುಂಟಾಗಿ ಶರೀರವು ಉತ್ಸಾಹಪೂರಿತವಾಗುವದು. ಉತ್ಸಾಹವೇ ಪೌಷ್ಟಿಕದ ಮೂಲವು; ಪೌಷ್ಟಿಕವು ದೇಹದಲ್ಲಿ ಹುಟ್ಟಲು ದೇಹದ ಎಲ್ಲ ವ್ಯಾಪಾರಗಳು ಒಳ್ಳೇ ಜೋರಿನಿಂದ ಸಾಗಹತ್ತುವವು. ಆ ಮೇಲೆ ಪಚನ ಶಕ್ತಿಯು ಹೆಚ್ಚಾಗಿ ಹಸಿವೆ ನೀರಡಿಕೆಗಳು ಚನ್ನಾಗಿ ಆಗುವವು. ಉತ್ತಮ ಆಹಾರವನ್ನು ಸಮಯಾನುಸಾರವಾಗಿ ದೇಹಕ್ಕೆ ಕೊಡುತ್ತ ಹೋಗಲು ಉದ್ಯೋಗ ಹುರುಪವು ಹಾತೊರೆಯಹತ್ತುವದು. ಆಲಸ್ಯವು ಅಡಗಿ ಹೋಗುವದು. ಇಷ್ಟೆಲ್ಲ ಮಹತ್ತರ ಲಾಭಗಳು ತಣ್ಣೀರಿನ ಸ್ನಾನದಲ್ಲಿ ಅಡಕವಾಗಿರುವವು. ಇದೇ ಮಾತನ್ನು ಆರೋಗ್ಯಶಾಸ್ತ್ರವೆಂಬ ಗ್ರಂಥದ ಅನುವಾದಕಾರರಾದ ಕೆ. ವ್ಹಿ. ಕುಲಕರ್ಣಿ ಬಿ. ಎ. ಯಸ್. ಟಿ. ಸಿ. ಡಿ. ಅಸಿಸ್ಟಂಟ ಮಾಸ್ತರ ಟ್ರೇನಿಂಗ ಕಾಲೇಜ ಧಾರವಾಡ ಇವರು "ತಣ್ಣೀರಿನ ಪ್ರಾತಃಕಾಲದ ಸ್ನಾನಕ್ಕಿಂತ ಹೆಚ್ಚು ಪರಿಣಾಮಕಾರಕವಾದ ಪೌಷ್ಟಿಕ ಔಷಧವೇ ಇಲ್ಲ"ವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ನಮ್ಮ ಪೂರ್ವಿಕರು ಇದೇ ತತ್ವವನ್ನೇ ಅರಿತು ಜನರಿಗೆ ತಣ್ಣೀರಿನ ಅವಶ್ಯಕತೆಯು ಅನುಭವವು ಆಗಬೇಕೆಂದೇ ವೈಶಾಖ, ಶ್ರಾವಣ, ಕಾರ್ತಿಕ, ಮಾಘ ಮೊದಲಾದ ತಿಂಗಳುಗಳಲ್ಲಿ ಧರ್ಮಸ್ವರೂಪದ ಫಲವನ್ನು ಅನುಭವಿಸುವದಕ್ಕಾಗಿ ಆಯಾ ತಿಂಗಳುಗಳ ಸ್ನಾನದ ಮಹತ್ವವನ್ನು ಹೇಳಿರುವರು. ಒಟ್ಟಿನ ಮೇಲೆ ಮಾನವನು ದೇಹದಿಂದ ಹೊರಡುವ ಮಲಿನವನ್ನು ದಿನಾಲು ಸ್ನಾನದ ಮೂಲಕ ತೊಳೆದು ಸ್ವಚ್ಛಮಾಡಿಕೊಳ್ಳಬೇಕೆಂದು ವಿಶ್ವಧರ್ಮಿಗಳು ಸ್ನಾನಮಾಡುವದನ್ನು ಧರ್ಮದ ಐದನೇ ನೇಮವನ್ನಾಗಿ ಗೊತ್ತುಮಾಡಿರುವರು.

# ಭಸ್ಮವು.



ಮನುಷ್ಯನು ದಿನಾಲು ದೇಹವನ್ನು ಸ್ನಾನದಿಂದ ಸ್ವಚ್ಛಮಾಡಿ ದೇವ ಪೂಜೆಗಾಗಿ ಬಿಲ್ವ, ಕುಸುಮಗಳನ್ನು ಸಂಗ್ರಹಿಸಿಟ್ಟುಕೊಂಡಮೇಲೆ ಅವನು ಭಸ್ಮವನ್ನು ಧರಿಸಬೇಕೆಂದು ಧಾರ್ಮಿಕರು ಗೊತ್ತುಮಾಡಿದ್ದಾರೆ. ಇದರ ಕಾರಣವೇನೆಂಬುವ ಸಂಗತಿಯನ್ನು ಸದ್ಯ ವಿಚಾರಿಸುವಾ.

ಮಾನವನು ತನ್ನ ದೇಹದಿಂದ ಹೊರಟ ಮಲಿನವನ್ನು ದಿನಾಲು ಸಬಕಾರ, ಶೀಗೀಕಾಯಿ ಮೊದಲಾದವುಗಳನ್ನು ಹಚ್ಚಿ ನೀರಿನಿಂದ ತೊಳೆದು ಸ್ವಚ್ಛಮಾಡಿಕೊಳ್ಳುತ್ತಾನೆ. ಆ ಮೇಲೆ ನಿರ್ಮಲವಾದ ದೇಹಕ್ಕೆ ಭಸ್ಮ (ವಿಭೂತಿ) ಧರಿಸುವದೆಂದರೆ ಆರೋಗ್ಯದ ವಿರುದ್ಧವೇ ಎಂಬ ಕಲ್ಪನೆಯು ಸಹಜವಾಗಿ ಹುಟ್ಟುವದು. ಯಾಕಂದರೆ ವಿಭೂತಿಯೆಂದರೆ ಬಿಳಿಯಬೂದಿ. ಈ ಹುಡಿಯನ್ನು ಹಸನವಾದ ಶರೀರಕ್ಕೆ ಹಚ್ಚುವದರಿಂದ ದೇಹವು ಮಲಿನವಾಗುವದುಂಟು. ಹೀಗಿದ್ದು ಸ್ವಚ್ಛಶರೀರಕ್ಕೆ ಬೂದಿಯ ಹುಡಿಯನ್ನು ಸಂಪರ್ಕಮಾಡುವದರಿಂದ ಆರೋಗ್ಯವು ಸಹಜವಾಗಿ ಕೆಡುವದು. ಅಂದಮೇಲೆ ಧಾರ್ಮಿಕರು ಮಾನವನಿಗೆ ಯಾಕೆ ಈ ನೇಮವನ್ನು ಹಾಕಿಕೊಟ್ಟಿರುವರು? ಆರೋಗ್ಯಕ್ಕೂ ಭಸ್ಮಧಾರಣೆಗೂ ಸಂಬಂಧವೆಂತು? ಎಂಬಕಲ್ಪನೆಯು ಈ ಕೆಳಗಿನ ಸಂಗತಿಯಿಂದ ತಿಳಿದುಬರುವದಾಗಿದೆ.

ಭಸ್ಮಕ್ಕೆ ಸಂಹಾರಕವೆಂತಲೂ ಐಶ್ವರ್ಯವೆಂತಲೂ ಹೆಸರುಗಳುಂಟು. ಭಸ್ಮವು ಒಂದು ಕ್ಷಾರ ಪದಾರ್ಥವಾಗಿರುವದು. ಶೀತಕಾಲದಲ್ಲಿ ಉಷ್ಣತೆಯನ್ನೂ ಉಷ್ಣಕಾಲದಲ್ಲಿ ಶೀತವನ್ನೂ ಉಂಟುಮಾಡತಕ್ಕ ಅಮೌಲ್ಯ ಗುಣವು ಈ ಭಸ್ಮದಲ್ಲಿ ಮನೆಮಾಡಿಕೊಂಡಿರುವದು. ಆದ್ದರಿಂದಲೇ ಯತಿಗಳು ಬಟ್ಟೆಗಳನ್ನು ಧರಿಸದೆ ಭಸ್ಮವನ್ನು ಮೈತುಂಬ ಧರಿಸಿಕೊಂಡು ಸುಖವಾಗಿ ಜೀವನವನ್ನು ಸಾಗಿಸುತ್ತಿರುವರು. ಅದರಿಂದಲೇ ಅವರಿಗೆ ಶಿತೋಷ್ಣತೆಗಳ ಬಾಧೆಗಳು ತಗಲುವದಿಲ್ಲವೆಂದು ನಮಗೆ ಕಂಡುಬರುವದು. ಅದರಂತೆ ಮನುಷ್ಯನು ದಿನಾಲು ಪ್ರಾತಃಕಾಲದಲ್ಲಿ ಎದ್ದು ಸ್ನಾನಮಾಡಲಾಗಿ ಆತನ ದೇಹವೆಲ್ಲ ತಂಪಾಗುವದು. ಆ ಸಮಯದಲ್ಲಿ ಕೂಡಲೇ

ಗಾಳಿ ತಗಲಿತೆಂದರೆ ಅವನಿಗೆ ವಿಶೇಷ ತಂಪಾಗಿ ಬಾಧೆ ತಟ್ಟುವ ಸಂಭವ ವುಂಟು. ತಂಪುಗುಣವನ್ನು ಹೊಡದೋಡಿಸಿ ಉಷ್ಣತೆಯನ್ನು ಕಾಯ್ದು ಕೊಳ್ಳುವ ಗುಣವು ಭಸ್ಮದಲ್ಲುಂಟೆಂದು ಮೇಲೆ ಹೇಳಿದೆಯಷ್ಟೇ! ಸ್ನಾನ ವಾದೊಡನೆಯೇ ದೇಹವನ್ನೆಲ್ಲ ಸ್ವಚ್ಛವಾಗಿ ಒರಿಸಿಕೊಂಡು ಆಕೂಡಲೇ ದೇಹಕ್ಕೆ ಭಸ್ಮವನ್ನು ಧರಿಸತಕ್ಕದು. ಅಂದರೆ ಅವನಿಗೆ ಯಾವತರಹದ ಬಾಧೆಯೂ ಆಗಲಾರದು. ಯತಿಗಳು ಯಾವಾಗಲೂ ಬರೇಮೈಯ್ಯಿಂದ ಇರುವದರಿಂದ ಅವರು ದೇಹದತುಂಬೆಲ್ಲ ದಟ್ಟವಾಗಿ ಭಸ್ಮವನ್ನು ಧರಿಸುವ ದುಂಟು. ನಾವು ಮಾತ್ರ ಸ್ನಾನವಾದನಂತರ ದೇವಪೂಜಾ ಸಮಯದಲ್ಲಷ್ಟೇ ಮೈಮೇಲೆ ವಿಶೇಷವಾಗಿ ಬಟ್ಟೆಯನ್ನು ಹಾಕಿಕೊಂಡಿರುವದಿಲ್ಲವಾದ ಕಾರಣ ಆ ಸವಯದಲ್ಲಿ ದೇಹದ ತುಂಬ ಅಂದರೆ ಹಣೆ, ಕೊರಳು, ಭುಜ, ಎದೆ, ಬೆನ್ನು ಮುಂತಾದ ದೇಹದ ಯಾವತ್ತೂ ಭಾಗಗಳಲ್ಲಿ ತ್ರಿಪುಂಡ್ರ ರೂಪವಾಗಿ ಭಸ್ಮವನ್ನು ಧಾರಣಮಾಡಿಕೊಳ್ಳುವದುಂಟು. ಅದರ ಉದ್ದೇಶ ವೆಂದರೆ ಸ್ನಾನಮಾಡುವದರಿಂದುಂಟಾದ ಶೀತ ಬಾಧೆಯಾಗಬಾರದೆಂಬುವ ದೇಸರಿ.

ಭಸ್ಮವು ಕ್ರಿಮಿನಾಶಕವಾಗಿರುವದು. ಪೂಜಾ ಸಮಯದಲ್ಲಿ ಮನು ಷ್ಯನು ಭಸ್ಮವನ್ನು ಧರಿಸಿಕೊಳ್ಳುವುದರಿಂದ ಅವನಿಗೆ ಯಾವ ಕ್ರಿಮಿಗಳ ಕಾಟವೂ ಆಗುವದಿಲ್ಲ. ಇದು ಕ್ರಿಮಿನಾಶಕವಾಗಿರುವದೆಂಬ ಬಗ್ಗೆ ಎಲ್ಲ ರಿಗೂ ಅನುಭವವುಂಟು. ಒಕ್ಕಲಿಗರು ತಮ್ಮ ಉಪಜೀವನದ ಪದಾರ್ಥಗಳ ನ್ನೆಲ್ಲ ಬಹುಕಾಲದವರೆಗೂ ಚಲೋ ಸ್ಥಿತಿಯಲ್ಲಿರಬೇಕೆಂಬ ಹೇತುವಿನಿಂದ ಎಲ್ಲ ಕಾಳುಗಳನ್ನು ಉತ್ತಮವಾದ ಭಸ್ಮ ಅಂದರೆ ಬೂದಿಯಲ್ಲಿ ಕೂಡಿ ಸಿಡುವದುಂಟು. ಹೀಗೆ ಮಾಡುವದರಿಂದ ಯಾವ ಕಾಳಿನ ಸಮೀಪಕ್ಕೂ ಕ್ರಿಮಿಗಳ ಸಂಚಾರವಾಗದೆ ಕಾಳುಗಳು ಮೊದಲಿನಂತೆ ಉತ್ತಮ ಸ್ಥಿತಿ ಯಲ್ಲಿಯೇ ಇರುವದುಂಟು. ಈ ಮಾತಿಗೆ ಸಾಕ್ಷಿಯೇ ಬೇಡ.

ಭಸ್ಮವನ್ನು ದೇಹಕ್ಕೆ ಧರಿಸುವರಿಂದ ಬಕ್ಕಿ, ಖಜ್ಜಿ ಮೊದಲಾದ ಚರ್ಮ ರೋಗಗಳುಂಟಾಗುವದಿಲ್ಲ. ದೇಹದ ತುಂಬೆಲ್ಲ ಹಚ್ಚಿಕೊಳ್ಳದಿದ್ದರೂ ಮಲಗಿ ಕೊಳ್ಳುವಾಗಲೂ ಮಲಗಿ ಎದ್ದಮೇಲೆಯೂ ಭಸ್ಮವನ್ನು ಮುಖಕ್ಕೆ ಹಚ್ಚಿ ಕೊಳ್ಳಬೇಕು. ಅಂದರೆ ಮುಖದ ಮೇಲೆ ಉತ್ಪನ್ನವಾಗುತ್ತಿರುವ ಮಡಿಬಕ್ಕಿ

ಅಂದರೆ ಪ್ರಾಯದಲ್ಲಿ ಹುಟ್ಟತಕ್ಕ ಬಕ್ಕಿಗಳು ಉತ್ಪನ್ನನಾಗುವದಿಲ್ಲ. ಇದೂ ಅಲ್ಲದೆ ಮುಖದಲ್ಲಿ ಕಾಂತಿ ಉತ್ಪನ್ನವಾಗುವದು. ಇತ್ತಿತ್ತಲಾಗಿ ಸುಧಾರಣಾಸಮಯದಲ್ಲಿ ವಿಜ್ಞಾನತತ್ವವೇತ್ತರು ಪ್ರತಿಯೊಂದು ಪದಾರ್ಥವನ್ನು ಶೋಧಿಸಿ ಅದರೊಳಗಿನ ಕಶ್ಮಲವನ್ನು ತೆಗೆದು ಚಂದವಾಗಿಯೂ ಆರೋಗ್ಯಕ್ಕೆ ಅನುಕೂಲವಾಗಿಯೂ ಆಗುವಂತೆ ಮಾಡುತ್ತಿರುವರು. ಸದ್ಯ ಪಾಶ್ಚಿಮಾತ್ಯ ಸುಧಾರಕರು ಪೌರ್ವಾತ್ಯರಾದ ನಾವು ಹಚ್ಚತಕ್ಕ ಭಸ್ಮವನ್ನು ಶೋಧಿಸಿ ಶುದ್ಧಗೊಳಿಸಿ ಪಾವಡರವೆಂಬ ಹೆಸರಿನ ಬಂಣದ ಪುಡಿಯನ್ನು ಮಾಡಿರುವರು. ಎಲ್ಲರೂ ಕಾಂತಿ ವಿಶೇಷಕ್ಕಾಗಿ ಈಗ ಅಕ್ಕರದಿಂದ ತಪ್ಪದೇ ಕೈಕಾಲು ಮುಖಗಳಿಗೆ ಹಚ್ಚಿಕೊಳ್ಳುವದನ್ನು ದಿನಾಲು ನಾವು ಕಣ್ಣಾರೆ ಕಾಣುತ್ತಿದ್ದೇವೆ.

ಭಸ್ಮವು ಪವಿತ್ರರೂಪವಾಗಿರುವದು. ಮನುಷ್ಯನು ಇದನ್ನು ಧಾರಣ ಮಾಡುವದರಿಂದ ಅವನಲ್ಲಿ ಉತ್ಪನ್ನವಾಗುತ್ತಿರುವ ಭೂತ ಅಂದರೆ ರಾಕ್ಷಸಿ ಗುಣಗಳು ಮದ, ಮತ್ಸರ, ಹಿಂಸಾದಿ ಗುಣಗಳು ನಾಶವಾಗಿ ದೈವೀಗುಣಗಳು ಅಂದರೆ ಅಹಿಂಸಾ, ಶಾಂತಿ, ಕ್ಷಮಾ, ದಯಾದಿಗಳು ಬೆಳೆಯತೊಡಗುತ್ತವೆ. ಮಾಂತ್ರಿಕರು ಭಸ್ಮವನ್ನು ಮಂತ್ರಿಸಿ ಮನುಷ್ಯರ ಮೇಲೆ ಊದುತ್ತಾರೆ. ಆಗ್ಗೆ ಅವರಲ್ಲಿದ್ದ ಭೂತ ( ಪಿಶಾಚಿ ) ಗಳು ಹೋಗುವದುಂಟು. ಈ ಅನುಭವವನ್ನು ನಾವು ಪದೇಪದೇ ಕಾಣುತ್ತಿರುತ್ತೇವೆ. ಇದರಿಂದ ಭಸ್ಮದಲ್ಲಿ ಅಪವಿತ್ರತೆಯನ್ನು ಹೋಗಲಾಡಿಸಿ ಪವಿತ್ರತೆಯನ್ನುಂಟುಮಾಡುವ ಶಕ್ತಿಯು ಸ್ವಭಾವ ಸಿದ್ಧವಾಗಿರುವದು. ಕಂಡುಬರುವದು. ಭಸ್ಮಸ್ನೇಹದಿಂದಲೇ ಮಾನವನು ಧಾರ್ಮಿಕನಾಗುತ್ತಾನೆ. ಈ ಧಾರ್ಮಿಕರೂಪವಾದ ಭಸ್ಮವನ್ನು ವಿಶ್ವಧರ್ಮಿಗಳು ತ್ರಿಪುಂಡ್ರರೂಪವಾಗಿ ಅಹೋರಾತ್ರಿ ಧರಿಸುತ್ತಾರೆ. ಜಗತ್ತು ಸತ್ವ, ರಜ, ತಮೊಗುಣಗಳ ಗುಂಪಾಗಿದೆ. ಈ ತ್ರಿಗುಣಗಳೆಂದರೆ ಮಾಯೆಯು. ಸತ್ವ, ರಜಾದಿ ಮೂರು ಗುಣಗಳನ್ನು ನಾಶಮಾಡುವದೆಂದರೆ ಮಾಯೆಯಿಂದ ದೂರಾಗಿರುವದೆಂದರ್ಥವು. ತ್ರಿಪುಂಡ್ರಧಾರಣೆಯೆಂದರೆ ಸತ್ವ, ರಜ, ತಮೋಗುಣಗಳ ಸಂಹಾರದ್ಯೋತಕವೇಸರಿ. ಅಂದರೆ ನಿರ್ಮಾಯಕತನವು. ವಿಶ್ವಧರ್ಮಿಗಳು ಮೂರು ಬೆರಳು ವಿಭೂತಿಯನ್ನು ಧರಿಸುವರೆಂದರೆ ಮಾಯೆಯು ಅಂದರೆ ಜಗತ್ತಿನ ಮೂಲ ಗುಣಗಳಿಂದ ಸತ್ವ, ರಜ, ತಮೋಗುಣಗಳನ್ನು

ಸುಟ್ಟು ಭಸ್ಮಮಾಡಿ ಅರ್ಥಾತ್ ಜಗತ್ತಿನ ಅಂದರೆ ಸಂಸಾರದಿಂದ ದೂರಾದ ಚಿನ್ಹಗಳನ್ನು ಧರಿಸುವರೆಂಬ ಬಿರುದುಳ್ಳವರು.

ಮನುಷ್ಯನ ದೇಹಕ್ಕೆ ಯಾವ ವಿಧದ ವಸ್ತುವಿನ ಸಂಪರ್ಕವಾಗುವದೋ ಅವನಿಗೆ ಅದೇ ಪ್ರಕಾರವಾದ ಭಾವನೆಯುತ್ಪನ್ನವಾಗುವದು ಎಂಥ ಹೇಡಿಯಿದ್ದರೂ ಖಡ್ಗಶಸ್ತ್ರವನ್ನು ಕೈಯಲ್ಲಿ ಪಿಡಿದಿದ್ದಾದರೆ ಅವನಲ್ಲಿ ಆಕಾಲದಲ್ಲಿ ತುಸುವಾದರೂ ವೀರಾವೇಶ ಉತ್ಪನ್ನವಾಗುವದು ಸಹಜವು. ಒಂದು ಕಾಲದಲ್ಲಿ ಸನ್ಯಾಸಿಯಾಗಿ ಭಸ್ಮ-ರುದ್ರಾಕ್ಷಿ-ಕಮಂಡಲುಗಳನ್ನು ಧರಿಸಿದವನಾದರೆ ಅವನಭಾವನೆಯು ಬದಲಾಗಿ ಕೇವಲ ಸಾಧುಗುಣವಿಶಿಷ್ಟವಾದ ನುಡಿಗಳೇ ಅವನಿಂದ ಹೊರಹೊರಡುವದುಂಟು. ಭಸ್ಮವು ಉತ್ತಮಗುಣವಿಶಿಷ್ಟವಾದ ವಸ್ತುವಾದ ಮೂಲಕ ಅದನ್ನು ಧರಿಸುವದರಿಂದ ಮನುಷ್ಯನಲ್ಲಿ ಹುಟ್ಟುತ್ತಿರುವ ದುಷ್ಟವ್ಯವಹಾರಗಳು ನಾಶವಾಗಿ ಆತನು ಸುಗುಣಿಯಾಗಿ ಸನ್ಮಾರ್ಗಗಾಮಿಯಾಗುವದರಲ್ಲಿ ತಿಲಮಾತ್ರವೂ ಸಂದೇಹವಿಲ್ಲ. ಆದ್ದರಿಂದಲೇ ಮಾನವನ ಉದ್ಧಾರ ಗುಣಗಳು ಭಸ್ಮದಲ್ಲಿ ಸಹಜವಾಗಿರುವದರಿಂದ ಇದರ ಸಂಪರ್ಕವು ಆತನಿಗೆ ಅಹೋರಾತ್ರಿ ಇರುವದುಚಿತವೆಂಬುದನ್ನರಿತು ಭಸ್ಮಧಾರಣೆಯನ್ನು ವಿಶ್ವಧರ್ಮಿಗಳು ಧರ್ಮದ ಆರನೇ ನೇಮವನ್ನಾಗಿ ಗೊತ್ತುಮಾಡಿದ್ದಾರೆ.

# ರುದ್ರಾಕ್ಷಿ.

ಇದು ಒಂದು ವನಸ್ಪತಿಯು. ಎಲ್ಲ ಸ್ಥಳಗಳಲ್ಲಿಯೂ ಇದು ಬೆಳೆದು ಬರುವದಿಲ್ಲ. ತನಗೆ ಅನುಕೂಲವಾದ ನೆಲ, ನೀರು, ಹವೆಗಳುಳ್ಳ ಸ್ಥಳಗಳಲ್ಲಿ ಬೆಳೆಯುವದು. ಇದರಂತೆ ಕೆಲವು ಮಹತ್ವದ ವನಸ್ಪತಿಗಳಾದರೂ ಎಲ್ಲ ಕಡೆಗೂ ಉದ್ಭವಿಸುವದಿಲ್ಲ. ಆದ್ದರಿಂದಲೇ ವನಸ್ಪತಿಗಳಲ್ಲಿ ಒಂದು ಬಗೆಯ ಗುಣಧರ್ಮಉಂಟಾಗುವದು. ಆಯಾಯ ಬೇರೆ ಬೇರೆ ಗುಣಧರ್ಮಗಳಿಂದಲೇ ಅವುಗಳು ಜಗತ್ತಿನಲ್ಲಿ ಜೀವನಿಗೆ ಅನೇಕ ಪ್ರಕಾರವಾಗಿ ಸಹಾಯವಾಗುವವು. ರುದ್ರಾಕ್ಷಿಯು ಹಿಂದುಸ್ಥಾನದ ಉತ್ತರ ಪ್ರದೇಶವಾದ ಹಿಮಾಲಯವೆಂಬ ಮಹತ್ಪರ್ವತದ ನಾಡುಗಳಾದ ನೇಪಾಳ, ಭೂತಾನಗಳಲ್ಲಿ ಬೆಳೆಯುವದು. ಈ ಪ್ರದೇಶಗಳಲ್ಲಿ ಅನೇಕ ಗಿಡಮೂಲಿಕೆಗಳು ದೊರೆಯುತ್ತವೆ. ಅತ್ಯುತ್ತಮಗಳಾದ ಔಷಧಗಳೂ ಸಹ ಇಲ್ಲಿ ಬೆಳೆಯುವ ವನಸ್ಪತಿಗಳಿಂದಲೇ ತಯಾರವಾಗುತ್ತವೆ. ಶೀಖರು ಈ ವನಸ್ಪತಿಗಳಿಂದ ಔಷಧಗಳನ್ನು ತಯಾರಿಸಿ ಈ ದೇಶ ಮತ್ತು ಪರದೇಶಗಳಿಗೂ ಕಳಿಸುತ್ತಾರೆ. ಅಪೇಸ್ಥಳದಲ್ಲಿ ಬೆಳೆದ ರುದ್ರಾಕ್ಷಿಯಲ್ಲಿಯೂ ಸಹ ಒಂದು ವಿಲಕ್ಷಣ ಗುಣವುಂಟು. ಹೇಗಂದರೆ ನೀರು, ಬೆಂಕಿಗಳ ಅಂತರ್ಗತವಾಗಿ ವಿದ್ಯುತ್ ಶಕ್ತಿ ಇರುತ್ತದಷ್ಟೇ? ಅದರಂತೆ ಶಿವನ ಶೀತಲವಾದ ಚಂದ್ರ ನೇತ್ರ ಉಷ್ಣತೆಯುಳ್ಳ ಸೂರ್ಯನಯನಗಳನಡುವೆ ಮೂರನೆಯದಾದ ವಿದ್ಯುಚ್ಛಕ್ತಿದಾಯಕ ಅಗ್ನಿ ನೇತ್ರವು ಇರುವದಲ್ಲವೇ? ಈ ಮೂರುಕಣ್ಣುಗಳಲ್ಲಿ ವಿಧ್ವಂಸಕ ಶಕ್ತಿಯುಳ್ಳದ್ದು ಅಗ್ನಿ ನೇತ್ರವು. ಅಲ್ಹಾದಕ ಶಕ್ತಿಯುಳ್ಳದ್ದು ಚಂದ್ರಕಣ್ಣು ಪ್ರಕಾಶ ಶಕ್ತಿಯುಳ್ಳದ್ದು ಸೂರ್ಯಕಣ್ಣು ಇವೆರಡು ಜೀವನಕ್ಕೆ ಸಂರಕ್ಷಕಗಳಾಗಿರುವವು. ಅಗ್ನಿನೇತ್ರವು ಮಾತ್ರ ಯಾವಾಗಲೂ ಸಂಹಾರಕ ಶಕ್ತಿಯುಳ್ಳದ್ದೇ ಆಗಿರುವದು. ಕಾಮದಹನವಾದದ್ದು ಅಗ್ನಿನೇತ್ರದಿಂದಲ್ಲವೇ? ಇದು ಒಂದು ವನಸ್ಪತಿಯಾಗಿ ಭೂಮಿಯಲ್ಲಿ ಹುಟ್ಟಿದರೂ ತನ್ನ ವಿಧ್ವಸಂಕ ಗುಣವನ್ನು ಕಳೆದುಕೊಂಡಿಲ್ಲ. ಆದ್ದರಿಂದಲೇ ಕೆಳಗೆ ಬರೆದಂತೆ ಅನೇಕ ರೋಗನಾಶಕವೂ ಮನಸ್ಸಿನ ಮಾಲಿನ್ಯಹಾರಕವೂ ಆಗಿರುವದೆಂದು ಅರಿತು ಇದನ್ನು ವೈದ್ಯರಾಗಲಿ ಧರ್ಮಜ್ಞರಾಗಲಿ ದೇಹದ ಮೇಲೆ ಧರಿಸಲು ಹೇಳುತ್ತಿದ್ದಾರೆ.

ಏನೇ ಇರಲಿ ರುದ್ರನ ಕಣ್ಣಿನಿಂದ ಎಲ್ಲವೂ ಉಪ್ಕಾರವಾಗುವಂತೆ ಅವನ ಹೆಸರಿನ ಈ ವನಸ್ಪತಿಯಿಂದ ಅನೇಕ ರೋಗ ನಿವಾರಣೆಯಾಗಿ ಮಾನವನು ಉದ್ಧಾರವಾಗುವಲ್ಲಿ ಏನೂ ಸಂಶಯವಿಲ್ಲ. ಮಹಾರೋಗ ವುಳ್ಳವರು ಈ ರುದ್ರಾಕ್ಷಿಯನ್ನು ತೇದು ರಬಟೆಯಂತೆ ಮಾಡಿ ಅದನ್ನು ಹಲ್ಲಿಗೂ ನಾಲಿಗೆಗೂ ಹಚ್ಚಿ ತಿಕ್ಕಿ ಬಾಯಿಯನ್ನು ಸ್ವಚ್ಛಮಾಡಿಕೊಳ್ಳುವರು ಕಣ್ಣುರೋಗಿಗೂ ಸಹ ಇದನ್ನು ಉಪಯೋಗಿಸುತ್ತಾರೆ. ಚಿತ್ತಭ್ರಮಣವುಳ್ಳ ಮಾನವನಿಗೂ ಬಾಲಗ್ರಹರೋಗಗಳುಳ್ಳ ಬಾಲಕರಿಗೂ ಇದನ್ನು ಶರೀರದ ಮೇಲೆ ಧಾರಣೆಮಾಡುವರು. ಶರೀರದ ಮೇಲೆ ಇದನ್ನು ಕಟ್ಟುವದರಿಂದ ಇದರಿಂದುಂಟಾಗುವ ವಿದ್ಯುತ್ತು ರೋಗಿಗಳಲ್ಲಿರುವ ರೋಗಿನ ಮೇಲೆ ಬಲ ವಾದ ಪರಿಣಾಮವಾಗಿ ರೋಗನಾಶವಾಗುವದಲ್ಲದೇ ಚಿತ್ತದಲ್ಲಿ ಶಾಂತಿ ಯುಂಟಾಗುವದು. ಇದನ್ನು ಮೈಮೇಲೆ ಧರಿಸುವದರಿಂದ ಎಂಥ ಕಠೋರ ಹೃದಯದವನಿದ್ದರೂ ಶಾಂತಮನಸ್ಕನಾಗಿ ತನ್ನ ಸುತ್ತಲಿನ ಜನರೊಡನೆ ಸೌಮ್ಯ ವೃತ್ತಿಯಿಂದ ವರ್ತಿಸಲು ಸುರುವುಮಾಡುತ್ತಾನೆ. ಇದು ಎಲ್ಲ ರಿಗೂ ಅನುಭವದ ಸಂಗತಿಯಾಗಿದೆ. ಈ ರುದ್ರಾಕ್ಷಿಯ ಸಂಗದಿಂದ ಆತ ನಲ್ಲಿ ಕ್ರೂರತನವು ಹೋಗಿ ದೈವೀಗುಣಗಳು ಉಂಟಾಗುತ್ತವೆ. ಅದ್ದರಿಂದಲೇ ಧರ್ಮಗ್ರಂಥದಲ್ಲಿ "ರುದ್ರಾಕ್ಷಧಾರಣಾದ್ರುದ್ರೋ ಭವತ್ಯತ್ರನಸಂಶಯಃ। ಅಂದರೆ ಮನುಷ್ಯನು ತಾನು ದೇಹದ ಮೇಲೆ ಜನ್ಮಾರಭ್ಯದಿಂದ ಸಾಯು ವವರೆಗೂ ರುದ್ರಾಯನ್ನು ಧರಿಸಿದರೆ ಅವನು ಯಾವಾಗಲೂ ಪಾಪದಿಂದ ವಿಮುಕ್ತನಾಗಿ ದೇವರೇ ಆಗುತ್ತಾನೆಂದು ಬರೆದಿರುತ್ತಾರೆ. ಅರ್ಥಾತ್ ರುದ್ರಾಕ್ಷಿಯನ್ನು ಮೈಮೇಲೆ ಧರಿಸುವದರಿಂದ ಅದರ ಸಂಪರ್ಕದ ಬಲದಿಂದ ಮನಸ್ಸಿನಲ್ಲಿ ಉತ್ತಮ ಗುಣಗಳು ಹುಟ್ಟಿ ಯಾವಾಗಲೂ ಸನ್ಮಾರ್ಗದ ಕಡೆಗೆ ಚಿತ್ತವುಳ್ಳ ವನಾಗಿ ಸುಖಿಯಾಗುವನೆಂಬ ಭಾವವು. ಕಾರಣ ವಿಶ್ವಧಾರ್ಮಿ ಕರು ಮನುಷ್ಯನ ಉದ್ಧಾರಕ್ಕಾಗಿ ಈ ರುದ್ರಾಕ್ಷಿಯನ್ನು ಧರಿಸಲು ಆತನಿಗೆ ಧರ್ಮದ ಏಳನೇ ನೇಮವನ್ನಾಗಿ ಗೊತ್ತುಮಾಡಿದ್ದಾರೆ.

# — ದೇವತಾರ್ಚನೆಯು —

ಮಾನವನು ತಾನು ಕಾಡುಸ್ಥಿತಿಯಲ್ಲಿದ್ದಾಗ್ಗೆ ಬೇಟೆಯಾಡಿ ಪ್ರಾಣಿಗಳನ್ನು ಕೊಂದು ಮಾಂಸವನ್ನು ತಿಂದು ಚರ್ಮವನ್ನು ಹೊದ್ದುಕೊಂ... ಕಾಡಿನೊಳಗೆ ಅಹೋರಾತ್ರಿ ವಾಸಿಸುತ್ತಿದ್ದನು. ಅವನಾಡುವ ಬೇಟೆಯ ಕಾಟದಿಂದ ಪ್ರಾಣಿಗಳು ಅವನಿಂದ ದೂರದೂರ ವಾಸಿಸತೊಡಗಿದವು. ತನ್ನ ಉಪಜೀವನಕ್ಕಾಗಿ ಅವನು ಅವುಗಳನ್ನು ಹುಡುಕಲೋಸುಗ ಕಾಡಿನಲ್ಲಿ ಅತ್ತಿತ್ತ ಸಂಚರಿಸತೊಡಗಿದನು. ಹೀಗೆ ಅರಣ್ಯಸಂಚಾರದಿಂದ ಅವನಿಗೆ ಸೃಷ್ಟಿಯ ಅಗಾಧ ಸ್ಥಿತಿಯನ್ನು ಕಂಡುಕೊಳ್ಳಲನುವಾಯಿತು. ಅವನು ಹೋದ ಹೋದಲ್ಲೆಲ್ಲ ಆಕಾಶವನ್ನು ಚುಂಬಿಸುವ ಗಿಡಗಳನ್ನೂ ಕೆಳಗೆ ನೋಡಲು ತಳಕಾಣದಂಥ ಭೀಕರ ಕೊಳ್ಳಗಳನ್ನೂ ಘೋರ್ಗರೆಯುತ್ತ ಹರಿಯುವ ಹಳ್ಳಹೊಳೆಗಳನ್ನೂ ಎತ್ತನೋಡಿದತ್ತ ಥಡಕಾಣಿಸದೆ ವಿಪುಲವಾದ ನೀರಿನಿಂದ ತುಂಬಿದ ಸಮುದ್ರಗಳನ್ನೂ ಕಂಡು ಅವನಲ್ಲಿ ಇವೆಲ್ಲವುಗಳ ವಿಷಯಕ್ಕೆ ವಿಕಾಸಬುದ್ಧಿಯುತ್ಪನ್ನವಾಯಿತು. ಬರಬರುತ್ತ ಅವನು ಕಣ್ಣಿಗೆ ಕಂಡ ಪ್ರತಿಯೊಂದು ವಸ್ತುವಿನ ವಿಷಯಕ್ಕೆ ವಿಚಾರಿಸತೊಡಗಿದನು. ಬೇಟೆಯ ದೆಶೆಯಿಂದ ಅವನು ಬೇಸತ್ತನು. ಗಿಡಗಳ ಹಂಣು-ಹಂಪಲಗಳು ಅನಾಯಾಸವಾಗಿ ದೊರೆಯಹತ್ತಲು ಅವುಗಳನ್ನೇ ತನ್ನ ಅಹಾರವನ್ನಾಗಿಮಾಡಿಕೊಂಡನು. ಪ್ರಾಣಿಗಳನ್ನು ಕೊಲ್ಲುವದು ಅವನಿಗೆ ಬೇಡವೆನಿಸಿತು. ಹಂಣು ಹಂಪಲಗಳ ಸಾತ್ವಿಕ ಅಹಾರದಿಂದ ಅವನ ದೃಷ್ಟಿಯು ಜಗತ್ತಿನ ಕಡೆಗೆ ಬಿದ್ದಿತು. ವಿಲಕ್ಷಣವಾದ ಪ್ರಾಣಿಗಳ ದೆಶೆಯಿಂದ ಅವನು ಭಯವುಳ್ಳವನಾದನು. ಮತ್ತು ಅವೇ ಪ್ರಾಣಿಗಳೇ ಈ ಕಂಣಿಗೆ ಕಾಣುವ ಜಗತ್ತಿಗೆ ಕಾರಣಗಳೆಂದು ತಿಳಿದುಕೊಂಡು ಅವುಗಳನ್ನು ಪೂಜಿಸತೊಡಗಿದನು. ಮೊಟ್ಟಮೊದಲು ಆತನು ಭಯಗ್ರಸ್ತವಾದ ಹಾವುಗಳನ್ನು ದೇವರೆಂದು ನಂಬಿದನು. ಆ ಮೇಲೆ ಸೂರ್ಯಚಂದ್ರ ವರುಣಾದಿಗಳನ್ನು ಜಗತ್ತಿನ ದೇವರುಗಳೆಂದು ಭಾವಿಸಿ ಆರಾಧಿಸತೊಡಗಿದನು. ಮತ್ತು ಅವುಗಳ ವಿಷಯಕ್ಕೆ ಅನೇಕ ಪ್ರಕಾರಗಳಾದ ಹಾಡುಗಳನ್ನು ಮಾಡಿ ಪೂಜಾಸಮಯದಲ್ಲಿ ಹಾಡತೊಡಗಿದನು. ಬರಬರುತ್ತ ತನ್ನ ವಿಚಾರ ಶಕ್ತಿಯ

ವಿಕಾಸದಿಂದ ಜಗತ್ತಿಗೆ ಮೂಲವಾದ ವಸ್ತುವು ಅಂದರೆ . ದೇವರು, ಮೇಲೆ ಹೇಳಿದ ಪ್ರಾಣಿಗಳಲ್ಲವೆಂದು ಅರಿತು, ಜಗತ್ತಿಗೆ ದೇವರು ತನ್ನಾಕಾರದವನೇ ಇರುವನೆಂದು ಅವನು ನಂಬಿ ಪುರುಷರೂಪನಾದ ದೇವ ನನ್ನೂ ಸ್ತ್ರೀರೂಪವಾದ ದೇವಿಯನ್ನೂ ಅನೇಕ ವಿಧವಾದ ಪೂಜಾ ಸಂಭ್ರಮ ದಿಂದ ಪೂಜೆಮಾಡತೊಡಗಿದನು. ಈ ಅರಾಧನೆಯ ಬಲದಿಂದಲೂ ಸಾತ್ವಿಕ ಸ್ವಭಾವದ ಹೆಚ್ಚಳದಿಂದಲೂ ಅವನಲ್ಲಿ ಜಗತ್ತಂದರೇನು ? ತಾನಂದರೇನು ? ತನಗೂ ಮತ್ತು ಈ ಜಗತ್ತಿಗೂ ಮೂಲವಾದ ವಸ್ತುವಾವದು ? ಮೊದಲಾದ ಸೂಕ್ಷ್ಮವಿಚಾರವು ಪಸರಿಸತೊಡಗಿತು. ಈ ಸದ್ವಿಚಾರ ಬಲದಿಂದ ನಿಜ ವಾದ ವಸ್ತು ಆವುದೆಂಬುದನ್ನು ಈ ಕೆಳಗಿನ ಸಂಗತಿಯಿಂದ ಕಂಡುಕೊಂಡನು ಮತ್ತು ಅದೇ ವಸ್ತುವೇ ಈ ಚರಾಚರಕ್ಕೂ ಆಧಾರಭೂತವಾದ ದೇವರೆಂದು ಗೊತ್ತು ಹಚ್ಚಿ ಆರಾಧಿಸಿ ನಿಜಸುಖ ಪಡೆದನು

ಜಗತ್ತಿನ ಕಡೆಗೆ ದೃಷ್ಟಿ ಇಟ್ಟು ತುಸು ವಿಚಾರಿಸಿ ನೋಡಿದರೆ ಆನೆ ಮೊದಲು ಇರುವೆ ಕಡೆಯಾಗಿ ಸಕಲ ಜೀವಿಗಳು ಅತ್ತಿಂದಿತ್ತ ಇತ್ತಿಂದತ್ತ ಒಂದೇ ಸವನೆ ಸಂಚರಿಸುತ್ತಿರುವವು. ಇದರ ಕಾರಣವೇನಿರಬಹುದೆಂಬುವ ಪ್ರಶ್ನದ ಉತ್ತರವನ್ನು ಹುಡುಕುತ್ತ ಹೋದರೆ ಎಲ್ಲ ಪ್ರಾಣಿಗಳದೂ ಏನಾದ ರೊಂದು ಗುರಿಯುಂಟೆಂಬುವದು ತಿಳಿದು ಬರುವದು. ಇರುವೆಯು ಎಲ್ಲ ಕಡೆಗೂ ಹರಿದಾಡುವದುಂಟು. ಏತಕ್ಕೆ ? ತನ್ನ ಅಹಾರಕ್ಕಾಗಿ. ಇದರಂತೆ ಸಕಲ ಪ್ರಾಣಿಗಳೂ ತಮ್ಮ ಉಪಜೀವನದ ಸಲುವಾಗಿ ಸುತ್ತಲೂ ಸಂಚರಿಸು ವದುಂಟು. ಅವುಗಳು ತಮಗೆ ಬೇಕಾದ ಒಡವೆಗಳನ್ನು ಹುಡುಕಿಕೊಂಡು ಅವುಗಳಿಂದ ಜೀವನದ ತೃಪ್ತಿಯನ್ನು ಪಡೆದು ಸುಖಹೊಂದಬೇಕೆಂಬ ಹಂಬ ಲವೇ ಎಲ್ಲ ಜೀವಿಗಳ ಹೆಗ್ಗುರಿಯೆಂಬುವದು ಕಂಡು ಬರುವದು ಒಟ್ಟಿನ ಮೇಲೆ ಜಗಜ್ಜೀವಿಗಳ ಗುರಿಯು ಸುಖವೇ ಹೊರತು ಮತ್ತೊಂದಿರುವದಿಲ್ಲ ವೆಂಬುವದು ಸ್ಪಷ್ಟವಾಗುವದು. ಸುಖವು ಕ್ಷಣಿಕ ಮತ್ತು ನಿತ್ಯ ಎಂದು ಎರಡು ಪ್ರಕಾರವಾಗಿರುವದೆಂಬದಾಗಿ ಬಲ್ಲವರು ಹೇಳುತ್ತಾರೆ. ಕ್ಷಣಿಕ ಸುಖವೆಂದರೆ ಸ್ವಲ್ಪಕಾಲದ ಆನಂದವು. ಇದನ್ನು ಸಕಲ ಜೀವಿಗಳೂ ಆಹೋ ರಾತ್ರಿ ಅನುಭವಿಸುತ್ತಿರುವವು. ಈ ಆನಂದವು ಪ್ರಾಣಿಗಳಲ್ಲಿ ಸದಾವಕಾಲ ನೆಲೆಗೊಳ್ಳುವದಿಲ್ಲ. ಉದಾಹರಣಾರ್ಥ ಮನುಷ್ಯನು ಮೃಷ್ಟಾನ್ನವನ್ನು

ಭುಂಜಿಸತೊಡಗುವನು ಅದರಿಂದ ಕೆಲವು ಕಾಲ ಆತನಿಗೆ ಹಿತವೆನಿಸುವದು. ಮುಂದೆ ಅದು ಹೆಚ್ಚಾಯಿತೆಂದರೆ ಅದರಿಂದ ಅವನಿಗೆ ಹಿತದ ಬದಲು ಅಹಿತವು ಕಂಡು ಬರುವದು. ಇದು ಎಲ್ಲರಿಗೂ ಅನುಭವದ ಮಾತು. ಕೆಲವುಕಾಲ ಆನಂದವೂ ಕೆಲವುಕಾಲ ದುಃಖವೂ ಆಗುವವಕ್ಕೆ ಕ್ಷಣಿಕಸುಖ ವೆನ್ನುವರು. ಆದರೆ ನಿತ್ಯಸುಖವು ಮಾತ್ರ ಹಾಗಲ್ಲ. ಅದು ದುಃಖವನ್ನು ಯಾವ ಕಾಲದಲ್ಲಿಯೂ ಕೊಡಲಾರದು. ಅದು ತನ್ನ ಆಶ್ರಯಿಸಿದ ಪ್ರಾಣಿ ಯನ್ನು ಯಾವಾಗಲೂ ಆನಂದದಲ್ಲಿ ಲೀನವನ್ನಾಗಿ ಮಾಡುವದು. ಇದನ್ನೇ ಎಲ್ಲ ಜೀವಿಗಳು ಆಶಿಸುತ್ತಿರುವವು. ಇದು ಪ್ರಾಣಿಮಾತ್ರಕ್ಕೂ ದೊರೆಯು ವದು ದುರ್ಲಭವಾಗಿದೆ. ಯಾಕಂದರೆ ಜೀವನು ಮೋಹ, ಅಹಂಕಾರಗಳಿಗೆ ವಶನಾಗಿ ಲೋಕದಲ್ಲಿ ಕಾಣುವ ವಸ್ತುಸಾಮುಗ್ರಿಗಳನ್ನು ತನಗೋಸುಗ ವಾಗಿ ಬಯಸುತ್ತ ತನ್ನ ಮತ್ತು ಪರಮಾತ್ಮನ ಸ್ವರೂಪವನ್ನೂ, ತದ್ವಿರ್ವರ ಸಂಬಂಧವನ್ನೂ ಮರೆತಿರುವದೇ ಕಾರಣವು. ನಿತ್ಯ ಅಂದರೆ ಪರಮಸುಖವು. ಇದು ಮಾನವನಿಗೆ ದೊರೆಯಬೇಕಾದರೆ ಅವನು ಆಧ್ಯಾತ್ಮ ಶಾಸ್ತ್ರಗಳನ್ನು ಮರೆಹೊಗಬೇಕು. ಪರಮಾತ್ಮನನ್ನು ಅಂದರೆ ತನ್ನ ವಿಶಾಲಶಕ್ತಿಯನ್ನು ತಾನು ಕಂಡಕೊಳ್ಳಬೇಕಾದರೆ ತಾನು ತನ್ನಲ್ಲಿ ನೆಲೆಗೊಂಡ ಅಹಂಕಾರವನ್ನು ತೊಲಗ ಬೇಕು. ಅಹಂಕಾರವು ನಾಶವಾಗಬೇಕಾದರೆ “ ನಿನ್ನೊಳಗೆ ಅಂತರ್ಯಾ ಮಿಯಾದ ಒಬ್ಬ ಆತ್ಮನಿದ್ದಾನೆ. ಅವನ ಆಜ್ಞೆಗೆ ನೀನು ಒಳಪಡಬೇಕು. ” ಎಂದು ಬುದ್ಧಿಹೇಳಿ ಅವನು ತನ್ನ ಮನಸ್ಸನ್ನು ಒಳಗಣ ಒಂದು ತತ್ವಕ್ಕೆ ಅಂದರೆ ಒಂದು ಘನವಾದ ಉದ್ದೇಶಕ್ಕೆ ವಿಧೇಯವಾಗಿರುವಂತೆ ಮಾಡಬೇಕು. ಹೀಗೆ ಮನಸ್ಸು ಅಂತರ್ಮುಖವಾದಾಗ ಮನುಷ್ಯನಿಗೆ ತನ್ನ ಆತ್ಮನಿಗಿಂತ ಬೇರೆಯಾಗದ ಅಂತರ್ಯಾಮಿಯಾಗಿ ಪ್ರೇರಕನಾಗಿರುವ ಪರಮಾತ್ಮನೊಬ್ಬ ನಿರುವನೆಂಗು ತೋರಿಬರುವದು. ಆಗ ಜೀವಾತ್ಮ ಪರಮಾತ್ಮರಿಗೆ ಈ ಕೆಳ ಗಿನ ದೃಷ್ಟಾಂತದಂತೆ ಅಚ್ಚಳಿಯದ ಸಂಬಂಧವು ಏರ್ಪಡುವದು.

ಒಬ್ಬ ಮನುಷ್ಯನು ಒಂದು ಮಾವಿನ ಬೀಜವನ್ನು ಭೂಮಿಯಲ್ಲಿ ಹಾಕಿ ಅದಕ್ಕೆ ನೀರು ಮತ್ತು ಗೊಬ್ಬರವನ್ನು ಹಾಕುತ್ತಿರಲು ಅಂಕುರವು ಉತ್ಪನ್ನ ವಾಯಿತು. ಕೆಲವು ಕಾಲದ ಮೇಲೆ ಬೆಳೆದು ದೊಡ್ಡದಾಗಿ ಪ್ರಾಯಕ್ಕೆ ಬಂದೊಡನೆ ಆ ಮರದಲ್ಲಿ ಹಣ್ಣುಗಳುಂಟಾದವು. ಅದೇ ಮನುಷ್ಯನು ಬೇಸಿ ಯ ಕಾಲದಲ್ಲಿ ಬೇಸತ್ತು ತಾನು ಬೀಜಹಾಕಿ ಬೆಳೆಸಿದ ಮಾವಿನ ಗಿಡದ ಕೆಳಗೆ

ಆರಾಮುಕ್ಕಾಗಿ ಮಲಗಿಕೊಂಡಿದ್ದಾನೆ. ಆಗ್ಗೆ ಅವನ ದೃಷ್ಟಿಯು ಮೇಲಕ್ಕೆ ಹೋಗಿವೆ. ಗಿಡದ ತುಂಬೆಲ್ಲ ಹಣ್ಣುಗಳು ಜೋತಾಡುತೊಡಗಿವೆ. ಅವನು ಅವುಗಳನ್ನು ಕಣ್ಣಾರೆ ಕಂಡನು. ಮಧುರ ರಸದಿಂದ ತುಂಬಿ ತುಳುಕುತ್ತಿದ್ದ ಮಾವಿನ ಹಣ್ಣು ಆತನ ಮನಸ್ಸನ್ನು ಸೆಳೆಯದೆ ಬಿಡಲಿಲ್ಲ. ಅವನು ಎದ್ದು ಒಂದು ಹಣ್ಣನ್ನು ಹರಿದು ತಂದು ತಿನ್ನುವದಕ್ಕಾಗಿ ಹೆಚ್ಚಿದನು. ನೋಡು ತ್ತಾನೆ. ತಾನು ಪೂರ್ವದಲ್ಲಿ ಯಾವ ಬೀಜವನ್ನು ಹಾಕಿದ್ದನೋ ಅದೇ ಬೀಜವು ಆತನ ಕೈಯಲ್ಲಿ ಕಾಣಹತ್ತಿತು. ಆಗ್ಗೆ ಅವನು ಅಚ್ಚರಿಗೊಂಡನು. ಪುನಃ ಕೆಲವು ಹಣ್ಣುಗಳನ್ನು ತಕ್ಕೊಂಡು ಹೆಚ್ಚಿ ನೋಡಲಾಗಿ ಅದೇ ಬೀಜವೇ ಎಲ್ಲ ಹಣ್ಣುಗಳ ಮಧ್ಯದಲ್ಲಿ ಇದ್ದದ್ದನ್ನು ಕಂಡುಕೊಂಡನು ಆಗ ಅವನು ಗಿಡಕ್ಕೆ ಮೂಲವಾದ ಬೀಜವೇ ಗಿಡವಲ್ಲುತ್ಪನ್ನವಾಗುವ ಸಾವಿರಾರು ಹಣ್ಣುಗಳ ಮಧ್ಯದಲ್ಲಿ ಇರುವವೆಂದು ನಿಶ್ಚಯವಾಗಿ ತಿಳಿದುಕೊಂಡನು. ಅದರಂತೆಯೇ ಜಗತ್ತೆಂಬ ಗಿಡಕ್ಕೆ ಪರಮಾತ್ಮನೇ ಮೂಲನು. ಈ ಜಗದ್ವೃಕ್ಷಕ್ಕೆ ಜೀವಿಗಳೇ ಹಣ್ಣುಗಳು. ಸಕಲಜೀವಿಗಳ ಮಧ್ಯದಲ್ಲಿ ಬೀಜರೂಪನಾದ ಪರಮಾತ್ಮನೇ ವಾಸವಾಗಿದ್ದಾನೆ " ಜೀವಶ್ಶಿವಃ ಶಿವೋ ಜೀವಃ। ಸಜೀವಃ ಕೇವಲಶ್ಶಿವಃ । " ಎಂಬಂತೆ ಜೀವಿಗಳ ಹೃದಯದಲ್ಲಿರುವ ಚೈತನ್ಯ ವಸ್ತುವೇ ಪರಮಾತ್ಮನ ಅಂಶವು. ಈಪ್ರಕಾರವಾದ ಸಂಬಂಧವು ಜೀವ ಮತ್ತು ಪರಮರೆಂಬ ಉಭಯ ಆತ್ಮರುಗಳಲ್ಲಿ ಇರುವದು. ಈ ಸಂಬಂಧವೇ ನಿತ್ಯಸುಖವು.

ಜೀವ ಮತ್ತು ಪರಮ ಈ ಉಭಯ ಆತ್ಮರುಗಳು ಅರೂಪ ಅಂದರೆ ಕಣ್ಣಿಗೆ ಕಾಣದ ವಸ್ತುಗಳು. ಜಗತ್ತು ಮಾತ್ರ ರೂಪಸಹಿತವಾದದ್ದು. ಆತ್ಮನು ಸ್ವತಂತ್ರನು. ಈ ಸ್ವತಂತ್ರ ವ್ಯಕ್ತಿಯಿಂದಲೇ ಈ ಜಡ ಜಗತ್ತು ಉಂಟಾಗಿರುವದೆಂಬುವದು ಮೇಲಿನ ಉದಾಹರಣೆಯಿಂದ ತಿಳಿದುಬರುವದು. ಈ ಜಡ ರೂಪದಿಂದ ಅಜಡ ಅಂದರೆ ಅರೂಪವನ್ನು ನಂಬಲೇಬೇಕು. ಯಾಕಂದರೆ ಕಾರ್ಯವು ಕಂಡು ಕಾರಣವು ಕಾಣದಿದ್ದಲ್ಲಿ ಅನುಮಾನಾದಿಗಳಿಂದ ಸಿದ್ಧ ಮಾಡಿಕೊಳ್ಳುವದುಂಟಲ್ಲವೇ ? ಚಿಂಕಿಯಿಂದ ಹೊಗೆ ಹೊರಡುವದಷ್ಟೇ ? ಹೊಗೆ ಚಿಂಕಿಗಳಿಗೆ ಕಾರ್ಯಕಾರಣ ಭಾವವು ನಮ್ಮ ಅನುಭವದಲ್ಲಿದ್ದುದರಿಂದ ಚಿಂಕಿಯು ಪ್ರತ್ಯಕ್ಷ ಕಾಣದಿದ್ದರೂ ಹೊಗೆಯನ್ನು ಕಂಡು ಚಿಂಕಿಯ ಇರವನ್ನು ನಿಶ್ಚಯಿಸಿಕೊಳ್ಳುತ್ತೇವೆ. ಅದರಂತೆ ಈ ವಿಶಾಲವಾದ ಜಗತ್ಕಾರ್ಯ

ವನ್ನು ಕಂಡು ಇದಕ್ಕೆ ಕಾರಣ ಪುರುಷರನ್ನು ನಾವು ನಂಬಲೇಬೇಕು. ಜಗತ್ತೆಂದರೆ ಪೃಥ್ವಿ, ಆಪ್, ತೇಜ, ವಾಯು, ಆಕಾಶಗಳೆಂಬ ಐದು ತತ್ವಗಳ ಗುಂಪು. ಇವುಗಳೊಳಗೆ ಸ್ವತಂತ್ರನಾದ ಆತ್ಮನು ಸೇರಿಕೊಳ್ಳುವದರಿಂದ ಜಗತ್ತಿನ ಕಾರ್ಯ ಉಂಟಾಗುವದು. ಅಂದರೆ ವೃಕ್ಷಾದಿಗಳಿಗೆ ಬೆಳವಣಿಗೆಯ ಶಕ್ತಿಯೂ ಜಲಕ್ಕೆ ಪ್ರವಹಿಸುವ ಶಕ್ತಿಯೂ ಬೆಂಕಿಗೆ ಸ್ಫುರಣಶಕ್ತಿಯೂ ವಾಯುವಿಗೆ ಪ್ರಸರಣ ಶಕ್ತಿಯೂ ಆಕಾಶಕ್ಕೆ ವಿಸ್ತಾರಿಕೆಯೂ ಹುಟ್ಟುವದುಂಟು. ಒಟ್ಟಿಗೆ ಈ ಜಗತ್ತನ್ನು ವಿಚಾರಿಸಿದರೆ ಮೇಲೆ ಹೇಳಿದ ಐದು ತತ್ವಗಳೂ ಮತ್ತು ಆತ್ಮನೂ ಈಆರು ವಸ್ತುಗಳಿಂದ ಚರಾಚರವಸ್ತುವು ನಿರ್ಮಿತವಾಗಿರುವದೆಂಬುವದು ತಿಳಿದುಬರುವದು. ಇದರ ಮುಖ್ಯಾಂಶವು ನಮ್ಮ ಶರೀರದೊಳಗೆ ಚನ್ನಾಗಿ ಕಂಡು ಬರುವದು.

ದೇಹವು ಮಣ್ಣು, ನೀರು, ಬೆಂಕಿ, ಗಾಳಿ, ಪೊಳ್ಳು ( ಆಕಾಶ ) ಈ ಐದು ತತ್ವಗಳಿಂದ ನಿರ್ಮಿತವಾಗಿರುವದು. ಇವುಗಳಿಗೆ ಸ್ವತಂತ್ರತೆಯು ಇರುವದಿಲ್ಲ. ಆದ್ದರಿಂದಲೇ ದೇಹವು ಪರತಂತ್ರ (ಜಡ) ವಾಗಿರುವದು ಈ ದೇಹದೊಳಗೆ ಸ್ವತಂತ್ರ ( ಆತ್ಮ ) ಶಕ್ತಿಯು ಕೂಡಿಕೊಂಡಿರುವದರಿಂದಲೇ ದೇಹವೂ ಆತ್ಮನೂ ಕೂಡಿ ಒಂದು ಪ್ರಾಣಿ ರೂಪದಿಂದ ವ್ಯವಹರಿಸುವದುಂಟು. ಒಳಗಿರುವ ಅತ್ಮನು ದೇಹದಿಂದ ಬಿಡುಗಡೆಹೊಂದಿದನೆಂದರೆ ದೇಹಕ್ಕೆ ಚೇತನೆಯುಂಟಾಗದೆ ಅದು ಬಿದ್ದಲ್ಲಿ ಬೀಳುವದು. ಅಂದಮೇಲೆ ಪಂಚತತ್ವಗಳಿಗೆ ಜಡತ್ವವೂ ಒಳಗಿನ ಆತ್ಮಕ್ಕೆ ಅಜಡತ್ವವೂ ( ಸ್ವತಂತ್ರತೆಯೂ ) ಸಿದ್ಧವಾಗುವದು. ಇದರಮೇಲಿಂದ ವಿಚಾರಿಸಲು ಪರಮಾತ್ಮನು ಐದು ತತ್ವಗಳನ್ನು ನಿರ್ಮಿಸಿ ಅವುಗಳಲ್ಲಿ ತಾನು ಪ್ರವೇಶಿಸಿ ಈ ಜಗದ್ರೂಪ ನಾಟಕವನ್ನು ಆಡಹತ್ತಿರುವನೆಂಬುವದು ಸಿದ್ಧವಾಗುವದು. ಈ ಜಗನ್ನಾಟಕದಿಂದಲೇ ಮೂಲವಸ್ತುವಾದ ಪರಮನು ಜೀವನೆಂದು ಹೆಸರು ಪಡೆದಿರುವನು.

ನಾಟಕವನ್ನು ಆಡಿತೋರಿಸಬೇಕೆಂಬ ಹಂಬಲವುಳ್ಳ ಪುರುಷನು ತಾನು ತನ್ನ ಪೂರ್ವದ ರೂಪವನ್ನು ಬಿಟ್ಟು ಬೇರೆ ವೇಷವನ್ನು ತಾಳಬೇಕಾಗುವದು. ಅಂದರೆ ತನ್ನ ಮೊದಲಿನ ರೂಪವನ್ನೂ ನಾಮವನ್ನೂ ಬೇರೆಮಾಡಬೇಕಾಗುವದು. ಉದಾಹರಣಾರ್ಥವಾಗಿ ಶಿವಪ್ಪನೆಂಬ ಹೆಸರಿನ ಒಬ್ಬಾನೊಬ್ಬ ಮನುಷ್ಯನು ಬಸವೇಶ್ವರನ ನಾಟಕವನ್ನು ಆಡಿ ತೋರಿಸುವ ಆಶೆ

ಯುಳ್ಳವನಾಗಿದ್ದಾನೆಂದು ತಿಳಿದುಕೊಳ್ಳೋಣ. ತಾನು ಶಿವಪ್ಪನೆಂಬ ಹೆಸರುಳ್ಳವನಾದರೂ ನಾಟಕದಲ್ಲಿ ಅವನು ಬಸವೇಶ್ವರನ ವೇಷವನ್ನು ಧಾರಣ ಮಾಡಿಕೊಂಡು ಅದೇ ಅಭಿಧಾನವನ್ನು ತಾಳತಕ್ಕದ್ದು. ಮತ್ತು ನಾಟಕಾಂತ್ಯದವರೆಗೂ ತಾನು ನಿಜವಾಗಿ ಬಸವನೆಂದೇ ತಿಳಿದು ಬಸವನ ವ್ಯವಹಾರಗಳನ್ನೇ ಮಾಡತಕ್ಕದ್ದು. ಆಗ್ಗೆ ಅವನು ಮಾಡತಕ್ಕ ನಾಟಕವು ಸಂಪೂರ್ಣವಾಗುವದು. ಹಿಡಿದ ನಾಟಕವನ್ನು ಕಡೆತನಕ ಮುಗಿಸಿದಮೇಲೆ ನಾಟಕದ ನಾಮವೂ ರೂಪವೂ ಬದಲಾಗಿ ತನ್ನ ಮೊದಲಿನ ನಾಮವೂ ರೂಪವೂ ಅವನಿಗೆ ಪ್ರಾಪ್ತವಾಗುವವು. ಅದರಂತೆ ನಿರಾಕಾರನಾದ ಪರಮಾತ್ಮನು ಜಗದ್ರೂಪ ನಾಟಕವನ್ನು ಆಡಬೇಕೆಂದು ಹಂಬಲಿಗನಾದಾಗ ಅವನು ಜಗತ್ತಿನೊಳಗೆ ಒಂದು ವೇಷಧಾರಿಯಾಗಬೇಕು. ಈ ಜಗತ್ತನ್ನುಂಟುಮಾಡಿದಾಗ ಜಗದ್ರೂಪ ನಾಟಕದಲ್ಲಿ ಮನಷ್ಯರೂಪಿ ವೇಷಧಾರಿಯು ತಾನಾಗಿರುವನು. ತಾನು ಕೈಕೆಂಡ ನಾಟಕವು ಪೂರ್ಣಗೊಳ್ಳುವದಕ್ಕಾಗಿ ನಾಟಕಕಾರನು ಅನೇಕ ಉಪಕರಣೆಗಳನ್ನು ಸಂಗ್ರಹಿಸಿಕೊಳ್ಳುವಂತೆ ಪರಮಾತ್ಮನು ಕೈಕೊಂಡಿರುವ ಈ ಜಗನ್ನಾಟಕದಲ್ಲಿ ತಾನು ಜೀವನಾಗಿದ್ದಾನೆ. ತನ್ನ ಉಪಯೋಗಕ್ಕೆ ಬೇಕಾಗುವ ಅನೇಕ, ಕಣ್ಣಿಗೆ ಕಣಿಸತಕ್ಕ, ಚಿತ್ರ ವಿಚಿತ್ರ ಪದಾರ್ಥಗಳನ್ನು ನಿರ್ಮಿಸಿಕೊಂಡಿದ್ದಾನೆ. ಅವುಗಳೊಡನೆ ತಾನು ಎಷ್ಟೋ ಕಾಲ ಕ್ಷಣಿಕ ಆನಂದದಲ್ಲಿ ಕಾಲಕಳೆಯುತ್ತಿದ್ದಾನೆ. ಜಗನ್ನಾಟಕವನ್ನು ಮುಗಿಸುವವರೆಗೂ ತನ್ನ ಮೊದಲಿನ ಅವಸ್ಥೆಯನ್ನೆಲ್ಲ ಮರೆತು ಅವನು ಜೀವನಾಗಿಯೇ ಇದ್ದುಕೊಂಡು ಈ ವಿಷಯಗಳಲ್ಲಿಯೇ ಸೇರಿಕೊಂಡು ವ್ಯವಹರಿಸಬೇಕಾಗುವದು. ತಾನು ಮೊದಲು ಪರಮಾತ್ಮ ( ಸರ್ವಜ್ಞ ) ನೆಂಬ ಅಭಿದಾನವುಳ್ಳವನಾದರೂ ಈ ಜಗನ್ನಾಟಕದಲ್ಲಿ ಸೇರಿದಾಗ ಮಾತ್ರ ಜೀವ ( ಕಿಂಚಿಜ್ಞ ) ನಾಗಿಯೇ ಇರಬೇಕಾಗುವದು. ಯಾವಾಗ್ಗೆ ಜೀವನು ಜಗತ್ತಿನ ವ್ಯವಹಾರವನ್ನು ಬಿಟ್ಟುಬಿಡುವನೋ ಆಗ್ಗೆ ಅವನು ತನಗುಂಟಾದ ಕಿಂಚಿಜ್ಞತ್ವವನ್ನು ಬಿಟ್ಟು ತನ್ನ ಮೊದಲಿನ ಸರ್ವಜ್ಞತ್ವವನ್ನು ಹೊಂದುವನು. ಅಂದರೆ ಅನಿತ್ಯ ಸುಖದಿಂದ ದೂರಾಗಿ ನಿತ್ಯ ಸುಖವನ್ನು ಹೊಂದುವನು.

ಕುರುಬನೊಬ್ಬನು ತನ್ನ ಕುರಿಯ ಹಿಂಡಿನೊಡನೆ ಅಡವಿಯಲ್ಲಿ ಸಂಚರಿಸುತ್ತಿದ್ದನು. ಆ ಕಾಲದಲ್ಲಿ ತಾಯಿಯನ್ನು ಅಗಲಿದ ಒಂದು ಸಿಂಹದ

ಮರಿಯು ಆತನಿಗೆ ದೊರಕಿತು. ಅದನ್ನು ಅವನು ತೆಗೆದುಕೊಂಡು ತನ್ನ ಕುರಿಯ ಹಿಂಡಿನೊಳಗೆ ಜೋಕೆ ಮಾಡಿದನು. ತನ್ನ ನಿಜ ಸ್ವರೂಪವನ್ನರಿಯದ ಸಿಂಹದ ಮರಿಯು ಬಹುಕಾಲದಿಂದಲೂ ಕುರಿಯ ಹಿಂಡಿನಲ್ಲಿ ಬೆಳೆದದ್ದರಿಂದ ತಾನೂ ಸಹ ಕುರಿಯೇ ಎಂದು ತಿಳಿದುಕೊಂಡು ತನ್ನ ಜೀವನವನ್ನು ಹಾಕುತ್ತಿತ್ತು. ಒಂದಾನೊಂದು ಸಮಯದಲ್ಲಿ ಅರಣ್ಯದೊಳಗೆ ಕುರಿಯ ಹಿಂಡು ಮೇಯಿಸುತ್ತಿದ್ದಾಗ ಒಂದು ಸಿಂಹವು ಈ ಮರಿಯನ್ನು ಕಂಡು ಅಚ್ಚರಿಗೊಂಡಿತು. " ಇದೇನು? ಈ ಮರಿಯು ನನ್ನಂತಿರುವದಲ್ಲಾ. ಇದು ಸಿಂಹದ ಮರಿಯೋ ? ಅಥವಾ ಕುರಿಯ ಮರಿಯೋ? ಕುರಿಯ ಜಾತಿಯೊಳಗೆ ನನ್ನಂಥ ಆಕಾರದ ಮರಿಯನ್ನು ನಾನು ಇನ್ನೂವರೆಗೂ ಕಂಡಿರುವದಿಲ್ಲ " ಈಗ ಮಾತ್ರ ಇದನ್ನು ವಿಚಾರಿಸಬೇಕೆಂದು ಆಲೋಚಿಸಿ ಸಿಂಹವು ಕುರಿಯ ಹಿಂಡಿನ ಮೇಲೆ ಸಾಗಿಹೋಯಿತು. ಅದನ್ನು ಕಂಡು ಕುರುಬನೂ ಕುರಿಗಳೂ ದಿಕ್ಕಾಪಾಲಾಗಿ ಓಡಿಹೋದವು. ಸಿಂಹದ ಮರಿಯು ಮಾತ್ರ ಕುರಿಯ ಸ್ವಭಾವದಂತೆ ಹೆದರದೆ ನಿಂತಲ್ಲಿಯೇನಿಂತುಬಿಟ್ಟಿತು. ಸಿಂಹವು, "ಅಯ್ಯಾನೀನು ಯಾರು ?ನೀನು ಈ ಕುರಿಯ ಹಿಂಡಿನೊಳಗಿರಲು ಕಾರಣವೇನು ? " ಇತ್ಯಾದಿ ಅನೇಕ ಪ್ರಕಾರವಾಗಿ ಕೇಳಿತು. ಆಗ್ಗೆ ಸಿಂಹದ ಮರಿಯು, " ನಾನು ಕುರಿಯ ಮರಿಯು. ನನ್ನೊಡೆಯನನ್ನೂ ನನ್ನ ಬಳಗವನ್ನೂ ನೀನು ಹೆದರಿಸಿ ಎಲ್ಲಿಗೆ ಕಳುಹಿದಿ ? " ಎಂದು ದಿಟ್ಟತನದಿಂದ ಸಿಂಹದ ಎದುರಿಗೆ ನಿಂತು ನುಡಿಯಿತು. ಇದನ್ನು ಕಂಡು ಇದರ ದಿಟ್ಟತನಕ್ಕೆ ಮೆಚ್ಚಿ ಸಿಂಹವು ಆ ಕುರಿಯ ಮರಿಯನ್ನು ಕುರಿತು, " ಅಯ್ಯಾ ನೀನು ಕುರಿಯ ಜಾತಿಯ ಮರಿಯಲ್ಲ. ನಿನ್ನ ಆಕಾರವನ್ನೂ ಕುರಿಯ ಆಕಾರವನ್ನೂ ಸರಿ ಹಚ್ಚಿ ನೋಡು. ನೀನು ಕುರಿಯ ಸ್ವರೂಪದಂತಿರದೆ ಬೇರೆ ಸ್ವರೂಪಿಯಾಗಿರುವಿ. ಅಗೋ ನನ್ನ ಆಕಾರಕ್ಕೂ ನಿನಗೂ ಸರಿ ಹಚ್ಚಿ ನೋಡು. ನನಗೂ ನಿನಗೂ ಏನು ಹೆಚ್ಚುಕಡಿಮೆಯುಂಟು? ನೀನು ಸಿಂಹದ ಮರಿಯು. ನಿನ್ನ ಮರಿವೆಯಿಂದ ಕುರಿಯ ಹಿಂಡಿನಲ್ಲಿ ವಾಸವಾಗಿ ಕುರಿಯೆಂದು ತಿಳಿದುಕೊಂಡಿರುವಿ. ನಿನ್ನನ್ನು ನೀನು ಚನ್ನಾಗಿ ಅರಿತುಕೊಳ್ಳು " ಎನ್ನಲು ಅದು ತನಗೂ ಸಿಂಹಕ್ಕೂ ಸಾಮ್ಯ ವೈಷಮ್ಯವನ್ನು ಚನ್ನಾಗಿ ವಿಚಾರಿಸಿತು. ಆಗ್ಗೆ ತನ್ನೊಳಗೆ ತಾನು, " ನಾನು, ಕುರಿಯ ಮರಿಯಲ್ಲ. ಸಿಂಹದ ಮರಿಯಾಗಿದ್ದೇನೆಂದು " ಅರಿತುಕೊಂಡಿತಂತೆ. ಅದೇಪ್ರಕಾರವಾಗಿ

ಸರ್ವಜ್ಞನಾದ ಪರಮಾತ್ಮನು ಎಷ್ಟೋ ಕಾಲದಿಂದಲೂ ಜಗತ್ತಿನ ಸಂಸರ್ಗದಿಂದ ತನ್ನ ಪೂರ್ವ ಸ್ವರೂಪವನ್ನು ಮರೆತು ತಾನು ಜೀವ ( ಕಿಂಚಿಜ್ಞ ) ನೆಂದು ನಿಶ್ಚಯವಾಗಿ ತಿಳಿದುಕೊಂಡು ವಿಷಯ ಸುಖಾನುಭೋಗಿಯಾಗಿ ಸುಖದುಃಖ ಚಕ್ರದೊಳಗೆ ಶಿಲುಕಿ ಗಾಶಿಯಾಗುತ್ತಿದ್ದಾನೆ. ಇದನ್ನರಿತು ಸಿಂಹವು ಮರಿಗೆ ಉಪದೇಶಿಸುವಂತೆ ಶ್ರೀ ಗುರುದೇವನು ಜೀವನಿಗೆ ಅವನ ನಿಜ ಸ್ವರೂಪವನ್ನು ಈ ಕೆಳಗಿನಂತೆ ಬೋಧಿಸಿದನು.

**ಶಿಷ್ಯಃ**— ಶ್ರೀ ಗುರುವರ್ಯನೇ ಜನ್ಮಾರಭ್ಯದಿಂದಲೂ ನನಗೆ ಕಷ್ಟವೆಂಬುವದು ತಪ್ಪಿಲ್ಲ. ಈ ಸಂಸಾರ ದುಃಖವು ದೂರಾಗಲು ಕಾರಣವನ್ನರುಹಬೇಕು.

**ಗುರುಃ**— ಶಿಷ್ಯನೇ ಕೇಳು. ಮನುಷ್ಯನು ಯಾವ ಬೀಜವನ್ನು ಬಿತ್ತುವನೋ ಅದರ ಫಲವನ್ನು ಅವನು ಉಣ್ಣುವನು. ಸತ್ಕರ್ಮವನ್ನು ಮಾಡಿದರೆ ಸುಖವೂ ದುಷ್ಕರ್ಮವನ್ನು ಮಾಡಿದರೆ ದುಃಖವೂ ಅವನಿಗೆ ತಪ್ಪಿದ್ದಲ್ಲ. ನೀನು ಕಷ್ಟವನ್ನು ಅನುಭವಿಸುತ್ತಿರುವಿಯೆಂದಮೇಲೆ ನಿನ್ನ ದುಷ್ಕರ್ಮವು ಬಲವಾಗಿರುವದು. ಇನ್ನುಮೇಲೆ ನೀನು ಸತ್ಕರ್ಮವನ್ನಾಚರಿಸು ಅಂದರೆ ನಿನಗೆ ಸುಖವು ದೊರಕುವದು.

**ಶಿಷ್ಯ:**— ಗುರುವೇ ಸತ್ಕರ್ಮದುಷ್ಕರ್ಮಗಳೆಂದರೇನೆಂಬುದನ್ನು ತಿಳಿಸಿರಿ.

**ಗುರು:**— ಶಿಷ್ಯನೇ ಯಾವ ಕಾರ್ಯವನ್ನು ಮಾಡುವದರಿಂದ ತನಗೂ ಮತ್ತು ಅನ್ಯರಿಗೂ ಇಹದಲ್ಲಿಯೂ ಪರದಲ್ಲಿಯೂ ಹಿತವಾಗುವದೋ ಅಂಥ ಕಾರ್ಯವು ಸತ್ಕರ್ಮವೆನ್ನಿಸಿಕೊಳ್ಳುವದು. ಉದಾಹರಣಾರ್ಥವಾಗಿ ದಾನ, ಧರ್ಮ, ಜಪ, ತಪ, ಗುರುಹಿರಿಯರ ಸೇವೆ ಮೊದಲಾದವುಗಳು. ಇವೆಲ್ಲವುಗಳನ್ನು ಆಚರಿಸುವದರಿಂದ ಯಾರಿಗೂ ಯಾವಕಾಲದಲ್ಲಿಯೂ ಕೇಡಾಗದೆ ಹಿತವೇ ಆಗುವದು. ದುಷ್ಕರ್ಮವೆಂದರೆ ಯಾವಕಾಲದಲ್ಲಿ ಯಾದರೂ ತನಗೂ ಇತರರಿಗೂ ಅಹಿತವನ್ನೇ ಮಾಡತಕ್ಕಂಥದು. ಉದಾಹರಣಾರ್ಥ ಪರಧನ, ಪರಸ್ತ್ರೀಹರಣ, ಕಳವು, ಕೊಲೆಸುಲಿಗೆ, ಬೆಂಕಿ ಹಚ್ಚೋಣ ಮೊದಲಾದವುಗಳು. ಇವೆಲ್ಲವುಗಳಿಂದ ಜನ್ಮಾರಭ್ಯದಿಂದ ಅಂತ್ಯದವರೆಗೂ ಅಹಿತವೇ ಆಗುವದು.

**ಶಿಷ್ಯ:—** ಗುರುವೇ ಪೂಜಾ ಕರ್ಮವು ಸತ್ಕರ್ಮವೆಂದು ತಿಳಿಸಿದಿರಿ. ಜಗತ್ತಿನೊಳಗೆ ಅಸಂಖ್ಯ ದೇವರುಗಳುಂಟು. ಯಾವ ದೇವರನ್ನು ಪೂಜಿಸತಕ್ಕದ್ದು ?

**ಗುರು:—** ಶಿಷ್ಯನೇ ದೇವರ ಕಲ್ಪನೆಯ ಬಗ್ಗೆ ಇದೇ ಪ್ರಕರಣದ ಆದಿಯಲ್ಲಿ ಉದಾಹರಿಸಿದ್ದಾಗಿದೆ. ಜಗತ್ತಿನೊಳಗೆ ಮೂರ್ತಿರೂಪ ದೇವರುಗಳು ಅಸಂಖ್ಯವಾಗಿ ನಿನಗೆ ಕಂಡರೂ ಅವೆಲ್ಲವುಗಳು ನಿಜವಾದ ದೇವರುಗಳಲ್ಲ. ಅಜ್ಞಜನರಿಗೆ ದೇವರೆಂಬ ಕಲ್ಪನೆಯುಂಟಾಗಬೇಕೆಂದು ಜ್ಞಾನಿಗಳು ಪೂಜಕನಲ್ಲಿಯ ಭಕ್ತಿಸ್ಥಿರತೆಗಾಗಿ ಅವಕ್ಕೆ ದೇವರೆಂಬ ಭಾವನೆಯನ್ನು ಕಲ್ಪಿಸಿಕೊಟ್ಟಿದ್ದಾರೆ. ಆದರೆ ವಿಶ್ವಧರ್ಮಿಗಳ ದೇವರ ಕಲ್ಪನೆಯು ಬೇರುಂಟು.

**ಶಿಷ್ಯ:—** ಗುರುವೇ ವಿಶ್ವಧರ್ಮವೆಂದರೇನು ?

**ಗುರು:—** ಶಿಷ್ಯನೇ ಕೇಳು. ಹಿಂದೂ ದೇಶದೊಳಗೆ ಧರ್ಮವು ವೇದಕಾಲದಲ್ಲಿ ವೇದಗಳ ಆಧಾರದಮೇಲಿಂದಲೇ ಹುಟ್ಟಿ ಕಾಲಾಂತರದ ಮೇಲೆ ಹಲವು ಮಾರ್ಪಾಡುಗಳನ್ನು ತಾಳಿ ಅಸಂಖ್ಯ ಶಾಖೆಗಳನ್ನು ಹೊಂದಿದರೂ ಮೂಲತಃ ಆ ಶಾಖೆಗಳಿಗೆಲ್ಲ ಹಿಂದೂ ಧರ್ಮವೆಂಬ ಹೆಸರು. ಹಿಂದೂ ಧರ್ಮವನ್ನು ಅವಲಂಬಿಸಿದ ಜನರು ಹಲವು ಮೂರ್ತಿರೂಪ ದೇವರುಗಳನ್ನು ನಂಬುವವರಾಗಿದ್ದರೂ ಸಾಮಾನ್ಯವಾಗಿ ಒಟ್ಟು ಮೂವತ್ತು ಮೂರು ಕೋಟಿಯಾಗಿ ವಿಭಾಗಿಸುವರು. ಅವುಗಳಲ್ಲಿ ತ್ರಿಮೂರ್ತಿಗಳೆನಿಸಿದ ಬ್ರಹ್ಮ, ವಿಷ್ಣು, ಶಿವರೆಂಬ ಮೂರು ಮೂರ್ತಿಗಳನ್ನು ಮುಖ್ಯರನ್ನಾಗಿ ನಂಬುವರು. ಈ ಮೂವರಲ್ಲಿಯೂ ಸಹ ವಿಷ್ಣು ಮತ್ತು ಶಿವ ಇವರಿಬ್ಬರನ್ನು ಅತಿ ಶ್ರೇಷ್ಠರೆಂದು ತಿಳಿದು ಕೆಲವರು ವಿಷ್ಣುವಿನನ್ನು ಆರಾಧ್ಯ ದೇವನನ್ನಾಗಿ ಮಾಡಿಕೊಂಡು ಆತನ ನಾಮವನ್ನು ಮಂತ್ರವನ್ನಾಗಿ ಕಲ್ಪಿಸಿಕೊಂಡವರು ವೈಷ್ಣವರಾದರು. ಶಿವನನ್ನು ಆರಾಧ್ಯ ದೇವನನ್ನಾಗಿ ನಂಬಿ ಆತನ ನಾಮವನ್ನು ಮಂತ್ರವನ್ನಾಗಿ ಕಲ್ಪಿಸಿಕೊಂಡವರು ಶೈವರಾದರು. ಈ ಉಭಯ ದೇವತಾರಾಧಕರು ಅಸಂಖ್ಯ ಒಳಭೇದಗಳನ್ನಾಗಿ ಕಲ್ಪಿಸಿ ಕೊಂಡರು. ಈ ಪ್ರಕಾರವಾಗಿ ದೈವೀ ಕಲ್ಪನೆಯನ್ನು ಶ್ರದ್ಧಾನುರೂಪವಾಗಿ

ಕಲ್ಪಿಸಿಕೊಂಡು ಅಷ್ಟಷ್ಟೇ ಗುಂಪು ಗುಂಪಾದರು. ಗುಂಪುಗಳನ್ನೆಲ್ಲ ಜಾತಿಗಳೆಂದು ಭಾವಿಸಿಕೊಂಡರು. ಪರಸ್ಪರ ಜಾತಿಜಾತಿಗಳೊಳಗೆ ಹೆಚ್ಚು ಕಡಿಮೆಯೆಂಬ ಕಲ್ಪನೆಯ ಬೀಜವು ಬೆಳೆಯತೊಡಗಿತು. ಜಾತಿಜಾತಿಗಳಲ್ಲಿ ಪರಸ್ಪರವಾಗಿ ಸಂಪರ್ಕವು ದೂರಾಯಿತು. ನಮ್ಮ ಜಾತಿಯೇ ಶ್ರೇಷ್ಠ. ನಮ್ಮ ವಿಧಿವಿಧಾನಗಳೇ ಮೋಕ್ಷಕ್ಕೆ ಕಾರಣ. ಇನ್ನುಳಿದವುಗಳಲ್ಲಿ ಇಂಥ ಅಪೌಲ್ಯ ಶಕ್ತಿ ಇಲ್ಲವೆಂಬದಾಗಿ ಸಂಕುಚಿತ ವಿಚಾರಗಳುಳ್ಳ ಎಷ್ಟೋಗ್ರಂಥಗಳೂ ಒತ್ತರದಿಂದ ಬಯಲಿಗೆ ಬಂದವು. ಇವುಗಳನ್ನೇ ಆಧಾರಗ್ರಂಥಗಳೆಂದು ಬಲವಾಗಿ ನಂಬಿಕೊಂಡು ಅವನ್ನೇ ಅನುಸರಿಸಿ ಇಂದಿಗೂ ವ್ಯವಹರಿಸುತ್ತಿರುವದು. ಈ ಎಲ್ಲ ಗುಂಪುಗಳು ಹಿಂದೂ ಧರ್ಮದೊಳಗೆ ಸಮಾವೇಶವಾದವುಗಳಾದರೂ ಇವುಗಳ ದೈವೀ ಕಲ್ಪನೆಯೂ ವಿಧಿವಿಧಾನಗಳ ಸ್ವರೂಪವೂ ಸಂಕುಚಿತವೂ ಜನಸಾಮಾನ್ಯದಿಂದ ದೂರಾದದ್ದೂ ಆಗಿರುವದು. ಆದರೆ ವಿಶ್ವಧರ್ಮವು ಹಿಂದೂ ಧರ್ಮದಲ್ಲಿ ಸಮಾವೇಶವಾದದ್ದೇ ಎಂಬ ಸಾಮಾನ್ಯವಾದ ಅಭಿಪ್ರಾಯವು ಪ್ರಚಾರಗೊಂಡಿದ್ದರೂ ತತ್ವತಃ ವಿಶ್ವಧರ್ಮದ ಕಲ್ಪನೆಯು ಬಹುವಿಚಾರಾರ್ಹವಾಗಿರುವದು. ಹಿಂದುಗಳು ವೇದಪ್ರಾಮಾಣ್ಯರೂ ವರ್ಣಾಶ್ರಮ ಪರಿಪಾಲಕರೂ ಪಿತೃಪೂಜಾತರ್ಪಣಾಸಕ್ತರೂ ವಿಗ್ರಹರೂಪ ದೇವತಾರಾಧಕರೂ ಅನೇಕ ಜನ್ಮಾಂತರ ನಂಬಿಗಸ್ತರೂ ಆಗಿರುವರು. ಆದರೆ ವಿಶ್ವಧರ್ಮಿಗಳು ವೇದವಿಹಿತ ಯಜ್ಞಾದಿಗಳನ್ನೂ, ಸೋಮರಸ, ಮದ್ಯಪಾನ, ಮಾಂಸಭಕ್ಷಣಗಳನ್ನೂ ಯಾವಕಾಲಕ್ಕೂ ಮಾಡುವದಿಲ್ಲ. ಬ್ರಾಹ್ಮಣ ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣಕಲ್ಪಿತವಾದ ಉಚ್ಚನೀಚ ಭೇದಗಳನ್ನು ಬಲವಾಗಿ ನಿಷೇಧಿಸಿರುವರು. ಶ್ರಾದ್ಧಾದಿ ಕರ್ಮಗಳಲ್ಲಿ ಇವರಿಗೆ ನಂಬಿಕೆಯಿರುವದಿಲ್ಲ. ಮೇಲೆ ಹೇಳಿದ ಗುಂಪುಗಳಂತೆ ಕೇವಲ ವ್ಯಕ್ತಿ ವೈಶಿಷ್ಟ್ಯವನ್ನು ಸಾರುವದಕ್ಕಾಗಲಿ ವ್ಯಕ್ತಿಯ ವಿಮುಕ್ತತೆಯನ್ನು ಸಾಧಿಸುವದಕ್ಕಾಗಲಿ ವಿಶ್ವಧರ್ಮವು ಜನ್ಮತಾಳಿಲ್ಲ. ಪಾಂಡಿತ್ಯದ ಹೆಮ್ಮೆಯಿಂದ ಗಹನ ತತ್ವಗಳನ್ನು ಪ್ರತಿಪಾದಿಸಿ ಜನತೆಯನ್ನು ದಂಗುಗೊಳಿಸುವದಕ್ಕೆ ಪ್ರಯತ್ನಿಸುತ್ತಿರುವದಿಲ್ಲ. ವಿಶ್ವಧರ್ಮಪ್ರತಿಪಾದಕರು ಜನತೆಯಿಂದ ಬಹಳ ದೂರದಲ್ಲಿ ನಿಂತುಕೊಂಡು ಜನಸಾಮಾನ್ಯರನ್ನು ಕಡೆಗಂಣಿನಿಂದ ಕಾಣುವ ಮಹಾನುಭಾವ ತತ್ವವನ್ನು ಮರೆಯಿಸುವದಿಲ್ಲ. ತಮ್ಮ ಆಧ್ಯಾತ್ಮಸಾಧನದಿಂದುಂಟಾದ ಆನಂದವು ಜನಸಾಮಾನ್ಯಕ್ಕೂ ದೊರೆಯಬೇಕೆಂದು ಬಯಸು

ತ್ತಿರುವರು. ತಮ್ಮ ಜೀವನವು ಹಸನಾದಂತೆ ಜಗತ್ತಿನ ಜೀವನವೆಲ್ಲವೂ ಹಸನಾಗಬೇಕು. ಜಗವೆಲ್ಲವು ಒಂದು ನಿಜವಾದ ಧರ್ಮತತ್ವದ ಶ್ವೇತಛತ್ರದ ಕೆಳಗೆ ಗೆಳೆಯರಂತೆಯೂ ಸೋದರರಂತೆಯೂ ಬಾಳಬೇಕೆಂಬುವದು ಅವರ ಹಿರಿಯಾಶೆಯಾಗಿರುವದು. ಸಕಲ ಜೀವರಿಗೆ ಲೇಸನೇ ಬಯಸುವವರೆಲ್ಲರೂ ಒಂದೇ ಕುಲಜರು ಎಂಬ ಘನವಾದ ತತ್ವವನ್ನು ಸಾರಿ ವಿಶ್ವಬಂಧುತ್ವವನ್ನು ಬಂಧುರಗೊಳಿಸಿರುವರು. ರುಜುವಾದ ಮಾನವ ಗುಣಗಳನ್ನು ಎತ್ತಿಹಿಡಿದು ಹಿರಿದು, ಕಿರಿದು, ಹೀನ, ಉತ್ತಮವೆಂಬುವ ಘೋರ ಅಪಶಬ್ದಗಳನ್ನು ತೊಡೆದು ಹಾಕಿರುವರು. ಸ್ತ್ರೀಯಳು ಸ್ವಾತಂತ್ರ್ಯತೆಗೆ ಅನರ್ಹಳೂ ಸದಾವ ಕಾಲದಲ್ಲಿಯೂ ಅನ್ಯರ ಆಶ್ರಿತಳೂ ಧರ್ಮಬಾಹ್ಯಳೂ ಎಂದಿದ್ದ ತಪ್ಪುಕಲ್ಪನೆಗಳನ್ನು ಬಲವಾಗಿ ಬದಲಾಯಿಸಿರುವರು. ವರ್ಣಭೇದಗಳು ಅಳಿಯಬೇಕು. ಮಾನವನ ಯೋಗ್ಯತೆಯನ್ನು ಹುಟ್ಟುವಿಕೆಯಿಂದ ಪರಿಗಣಿಸದೆ ಗುಣದಿಂದ ಗಣಿಸಬೇಕು. ಧರ್ಮತತ್ವಗಳು ಸರಳವಾಗಿ ತಿಳಿಯದವರ ಮನಸ್ಸನ್ನೂ ಸಹ ಆಕರ್ಷಿಸುವಷ್ಟು ಹೃದಯಂಗಮವಾಗಿರಬೇಕು. ಧರ್ಮಜ್ಞಾನವು ಯಾರೊಬ್ಬರ ಸೊತ್ತಾಗಿರದೆ ಪ್ರಪಂಚದ ಎಲ್ಲ ಜನರ ಆಸ್ತಿಯಾಗಿರಬೇಕು. ಯಜ್ಞಯಾಗಾದಿಗಳು ನಿಲ್ಲಬೇಕು. ಅರ್ಥವಿಲ್ಲದ ರೂಢಮೂಲವಾದ ಆಚಾರಗಳೂ ಅಂಧಶ್ರದ್ಧೆಗಳೂ ನಿಂತುಹೋಗಬೇಕು. ಶಾಸ್ತ್ರ ಪುರಾಣಾದಿ ನಿರ್ಜೀವ ಗ್ರಂಥತತ್ವಗಳಿಗಿಂತಲೂ ಪರಿಶುದ್ಧಮಯವಾದ ಸಜೀವ ವ್ಯಕ್ತಿಯ ಹೃದಯಾನುಭವವೇ ಮುಖ್ಯವು. ಇವೇ ಮೊದಲಾದ ಉಚ್ಚ ವಿಚಾರಗಳೇ ವಿಶ್ವಧರ್ಮದ ರಹಸ್ಯಗಳಾಗಿವೆ. ಇದಕ್ಕೇನೇ ವಿಶ್ವಧರ್ಮವೆನ್ನುವರು.

**ಶಿಷ್ಯ:**— ಗುರುವೇ ಈ ವಿಶ್ವಧರ್ಮದ ರಹಸ್ಯವು ಜಗತ್ತನ್ನೇ ಉದ್ಧಾರಮಾಡುವಂಥದಿರುವದು. ಇನ್ನು ಈ ವಿಶ್ವಧರ್ಮದ ದೇವಪೂಜಾಕಲ್ಪನೆಯ ಬಗೆಯೆಂತು ?

**ಗುರು:**— ಶಿಷ್ಯನೇ ಚಿತ್ತವಿಟ್ಟು ಕೇಳು. ವಿಶ್ವಧರ್ಮಿಗಳು ಪೂಜಿಸುವ ದೇವಕಲ್ಪನೆಯು ಬೇರುಂಟು. ಇವರು ಶಿವೋಪಾಸಕರಾದರೂ ಶಿವನ ಅನೇಕ ರೂಪಗಳಾದ ದಕ್ಷಿಣಾಮೂರ್ತಿ, ನಟರಾಜ, ಸೋಮಸ್ಕಂದ, ಉಮಾಮಹೇಶ ಮೊದಲಾದ ವಿಗ್ರಹ ( ಮೂರ್ತಿ ) ಗಳನ್ನುಪೂಜಿಸುವದಿಲ್ಲ. ಬ್ರಹ್ಮಾಂಡಕರ್ತರಾದ ಬ್ರಹ್ಮ ವಿಷ್ಣು, ಶಿವರೆಂಬ ತ್ರಿಮೂರ್ತಿಗಳಿಗಾಧಾರನಾದ

ಪರಶಿವನು ಬೇರೆ ಇದ್ದಾನೆ. ಅವನು ನಿರಾಕಾರ, ನಷ್ಕಲ, ನಿರ್ಗುಣನಾಗಿದ್ದಾನೆ. ಸೃಷ್ಟಿಯಲ್ಲವೂ ಅವನ ಲೀಲೆ (ಮಾಯೆಯಲ್ಲ). ಈಲೀಲೆ ನಡೆಯುವದಕ್ಕೆ ಅವನಿಗೆ ಶಕ್ತಿಯು ನೆರವುಬೇಕು. ಆ ಶಕ್ತಿಯು ಪರಶಿವನಲ್ಲಿ ಅವಿನಾಭೂತದಿಂದ ಚಂದ್ರನಲ್ಲಿ ಚಂದ್ರಿಕೆಯೂ, ಸೂರ್ಯನಲ್ಲಿ ಪ್ರಭೆಯೂ, ಅಗ್ನಿಯಲ್ಲಿ ದಹನಶಕ್ತಿಯೂ, ಕುಸುಮದಲ್ಲಿ ಗಂಧವೂ, ಸಕ್ಕರೆಯಲ್ಲಿ ಸೀ, ರುಚಿಯೂ ಇರುವಂತೆ ಇರುವದು. ಈ ಲೀಲೆಯಿಂದುಂಟಾದ ಸೃಷ್ಟಿಯಲ್ಲಿ ತೋರುವ ಪ್ರತಿಯೊಂದು ವಸ್ತುವಿನಲ್ಲಿಯೂ ಪರಶಿವನು ಅಂತರ್ಭೂತನಾಗಿರುವನು. ಅದರಂತೆ ಮನುಷ್ಯನಲ್ಲಿಯೂ ಸಹ ವಾಸವಾಗಿರುವನು. ಆದರೆ ಸ್ಥೂಲಶರೀರದ ಕಟ್ಟಿನ ಮೂಲಕವಾಗಿ ಮಲತ್ರಯಗಳ ಸಂಬಂಧದಿಂದ ಅಜ್ಞಾನ ಮರೆವೆ ಇವು ಜೀವನನ್ನು ಆವರಿಸಿಕೊಂಡಿರುತ್ತವೆ ಈ ಪ್ರತಿಬಂಧಕಗಳನ್ನು ಭೇದಿಸಿ ಪರವಸ್ತುವನ್ನು ಸಾಧಿಸುವದೇ ಜೀವನಗುರಿಯು. ಜೀವನಿಗೆ ತನ್ನ ಅರಿವು ವುಂಟಾಗುವದೇ ಇದಕ್ಕೆ ಮೂಲವು. ಅದಕ್ಕಾಗಿ ಜೀವನು ಭಕ್ತಿಭಾವದಿಂದ ಸುಜ್ಞಾನಿಯಾದ ಗುರುವಿನನ್ನು ಅರಸುತ್ತಾನೆ. ಆಗುರುವು ಕೃಪೆಯಿಂದ ಆಂತರಿಕ ಶಿಷ್ಯನ ಶಿವ ಕಳೆಯನ್ನು ಲಿಂಗವನ್ನಾಗಿ ಮಾಡಿ ಭಕ್ತನ ಕೈಯಲ್ಲಿ ಕೊಡುತ್ತಾನೆ. ಈ ಲಿಂಗಸಂಬಂಧವುಳ್ಳ ಜೀವನಿಗೆ ವಿಶ್ವಧರ್ಮದಲ್ಲಿ ಅಂಗನೆಂಬ ಹೆಸರು. ಅಂಗನು ಉಪಾಸಕನು. ಲಿಂಗವು ಉಪಾಸ್ಯವು. ಅಂಗ ಲಿಂಗಗಳೆರಡೂ ನಾಮಭೇದಗಳೇ ಹೊರತು ಭಿನ್ನ ವಸ್ತುಗಳಲ್ಲವು. ಅಂಗನು ಲಿಂಗವನ್ನು ಬೇರೆಮತದವರಂತೆ ಎದುರಿಟ್ಟು ಪೂಜಿಸುವದಿಲ್ಲ. ತಾನೇ ಅವನೆಂದು ನೆನೆಯುತ್ತಾನೆ. ಕರತಳದಲ್ಲಿ ಪೂಜಿಸುವ ಲಿಂಗವು ಇಷ್ಟ, ಪ್ರಾಣ ಭಾವಗಳೆಂದು ಮೂರು ವಿಧವಾಗಿರುವದು.

ಒಬ್ಬ ಕಲಾವಿದನಲ್ಲಿ ಅನಂತ ಕಲೆಗಳ ಜ್ಞಾನನಿಧಿಯು ತುಂಬಿಕೊಂಡಿರುವದು. ಮೊದಲು ಯಾವಮೂರ್ತಿಯ ಆಕಾರವೂ ಆತನಲ್ಲಿ ವ್ಯಕ್ತರೂಪದಲ್ಲಿ ಕಂಡುಬರುವದಿಲ್ಲ. ಆ ಅವಸ್ಥೆಯಲ್ಲಿ ಅವನೊಳಗೆ ಎಲ್ಲ ಕಲೆಗಳೂ ನಿರಾಕಾರ ( ಅವ್ಯಕ್ತ ) ದಿಂದಿರುವವು ಒಂದು ಕಾಲದಲ್ಲಿ ಯಾವದಾದರೊಂದು ಚಿತ್ರವನ್ನು ಬರೆಯಬೇಕೆಂಬ ಬುದ್ಧಿಯು ಅವನಲ್ಲಿ ಉತ್ಪನ್ನವಾಗಲು ಆಗ ಅವನ ಬುದ್ಧಿಯೊಳಗೆ ಆ ಚಿತ್ರದ ನೆನಪು ರೂಪಗೊಳ್ಳುವದು. ಬುದ್ಧಿಯಲ್ಲಿ ರೂಪಗೊಂಡರೂ ಹೊರಗೆ ಅದು ಪ್ರಕಟವಾಗಿರುವದಿಲ್ಲ. ಆದ್ದ

ರಿಂದಲೇ ಅದು ಆಗ್ಗೆ ವ್ಯಕ್ತವೂ ಅವ್ಯಕ್ತವೂ ಹೀಗೆ ಎರಡೂ ರೂಪವನ್ನು ತಾಳುವದು. ಆಮೇಲೆ ಕಲಾವಿದನು ತನ್ನ ಬುದ್ಧಿಯಲ್ಲಿ ಚಿತ್ರಿಸಿದ್ದನ್ನೆಲ್ಲ ಕೈಮೂಲಕವಾಗಿ ಒಂದು ಗೋಡೆಯ ಮೇಲಾಗಲಿ ಕಾಗದದ ಮೇಲಾಗಲಿ ಬರೆಯುತ್ತಾನೆ. ಆಗ್ಗೆ ಅದು ವ್ಯಕ್ತವಾಗುವದು. ಮತ್ತು ನಮ್ಮ ಕಣ್ಣಿಗೆ ಕಾಣಲು ಅನುಕೂಲವಾಗುವದು. ನಿಚ್ಚಳವಾಗಿ ಕಣ್ಣಿಗೆ ಕಾಣುವ ವಸ್ತುವು ಮೊದಲು ಬುದ್ಧಿಯಲ್ಲಿ ವ್ಯಕ್ತವಾಗಿಯೂ ಹೊರಗೆ ಅವ್ಯಕ್ತವಾಗಿಯೂ ಇದ್ದುದೇ ಅಲ್ಲವೇ ? ಅದಕ್ಕೂ ಪೂರ್ವದಲ್ಲಿ ಅದು ಆ ಕಲಾವಿದನಲ್ಲಿ ಅವ್ಯಕ್ತವಾಗಿತ್ತಲ್ಲವೇ ಹೀಗೆ ಅವ್ಯಕ್ತ, ಮತ್ತು ವ್ಯಕ್ತಅವ್ಯಕ್ತ. ಇದು ಅಲ್ಲದೆ ಕಡೆಗೆ ವ್ಯಕ್ತವಾಗಿ ಮೂರು ಪ್ರಕಾರವಾದದ್ದು ಒಂದೇ ಕಲೆಯಲ್ಲವೇ ? ಅದರಂತೆ ನಿರಾಕಾರ ಸ್ಥಿತಿಯಲ್ಲಿ ಭಾವಭರಿತವಾದ ಭಾವಲಿಂಗವೂ, ಆಕಾರ ಮತ್ತು ನಿರಾಕಾರವಾಗಿ ಪ್ರಾಣವಾಸಿಯಾದ ಪ್ರಾಣಲಿಂಗವೂ ಇಂದ್ರಿಗೆ ಇಷ್ಟವಾಗಿ ಪ್ರಕಟವಾಗಿರುವ ಇಷ್ಟಲಿಂಗವೂ ಹೀಗೆ ಜಗದಾಧಾರವಾದ ಲಿಂಗವು ಮೂರು ತೆರನಾದರೂ, ಕ್ಷೀರ ದಧಿ,ಘೃತ ಮೊದಲಾದವುಗಳು ನಾಮಗಳಿಂದ ಬೇರೆಯಾಗಿದ್ದರೂ ಅವು ವಿಚಾರಾಂತ್ಯದಲ್ಲಿ ಒಂದೇ ಕಾಣುವಂತೆ ಇಷ್ಟ, ಪ್ರಾಣ, ಭಾವ ಲಿಂಗಗಳು ಒಂದೇಒಂದಾಗಿರುವವು. ಇಷ್ಟಲಿಂಗವು ಶಿವನ ಪ್ರತೀಕವಲ್ಲ. ನಿಷ್ಕಲವಾದ ಶಿವನ ಸಕಲರೂಪವು. ಇಷ್ಟಲಿಂಗ ಪೂಜೆಯು ಮೂರ್ತಿ ಪೂಜೆಯಲ್ಲ. ಇದನ್ನು ವಿಶ್ವಧರ್ಮಿಗಳು ಇತರರಂತೆ ಭಿನ್ನವಾದದ್ದೆಂದೂ ಅದು ದೊಡ್ಡದು. ನಾನು ಕಡಿಮೆಯವನು. ಅದು ಬೇರೆ ನಾನು ಬೇರೆ ಎಂದೂ ತಿಳಿಯದೆ ತನಗಿಂತ ಅಭಿನ್ನವಾದದ್ದೆಂದರಿತು ನೆನೆಯುವರು.

**ಶಿಷ್ಯ:**— ಗುರುವೇ ಇಷ್ಟಲಿಂಗವು ನಿಜವಾದ ದೇವರೆಂದಬಳಿಕ ಜನವೆಲ್ಲವೂ ಅದನ್ನು ಬಿಟ್ಟು ಬೇರೆ ಬೇರೆ ಆಕಾರವುಳ್ಳ ಮೂರ್ತಿಗಳನ್ನು ಯಾಕೆ ಪೂಜಿಸುವರು ? ಅವುಗಳೆಲ್ಲ ದೇವರುಗಳಲ್ಲವೆಂದು ತಿಳಿದುಕೊಂಡ ಮೇಲೆ ಅವುಗಳ ಪೂಜೆಯಲ್ಲ ವ್ಯರ್ಥವಾಯಿತಲ್ಲವೇ ?

**ಗುರು:**— ಶಿಷ್ಯನೇ ನೀನು ಮಾಡಿದ ಪ್ರಶ್ನವು ಉತ್ತಮವಾದದ್ದು. ಲಕ್ಷವಿಟ್ಟು ಕೇಳು. ಗುರಿಯನ್ನು ಹೊಡೆಯತಕ್ಕ ಮನುಷ್ಯನು ಗುರಿಯು

ಸಿದ್ಧಿಸುವವರೆಗೂ ಕ್ರಮೇಣವಾಗಿ ಸ್ಥೂಲಮಾನದಿಂದ ಗುರಿಹೊಡೆಯಲು ಪ್ರಯತ್ನಿಸುವನು. ಮೊದಲು ಅವನು ದೊಡ್ಡ ಪ್ರಮಾಣದಲ್ಲಿ ಗುರಿಯನ್ನು ಗಟ್ಟಿಗೊಳಿಸುವನು. ಬರಬರುತ್ತ ಸೂಕ್ಷ್ಮವಾದ ಗುರಿಯನ್ನು ಹೊಡೆಯಲು ಸಮರ್ಥನಾಗುವನು. ಅದೂ ಸಿದ್ಧಿಸಿತೆಂದರೆ ಎಂಥ ಗುರಿಯನ್ನಾದರೂ ಹೊಡೆಯಲು ಪ್ರವೀಣನಾಗುತ್ತಾನೆ. ಅದರಂತೆ ಕಣ್ಣಿಗೆ ಕಾಣಿಸುವ ಈ ಜಗತ್ತಿನ ಮತ್ತು ಇದಕ್ಕೆ ಆಧಾರಭೂತವಾದ ವಸ್ತುವಿನ ಜ್ಞಾನವಾಗುವ ವರೆಗೂ ಜಗತ್ತಿನೊಳಗೆ ತಾನು ಇದ್ದುಕೊಂಡು ತನಗಿಂತ ವಿಲಕ್ಷಣವಾದ ವಸ್ತುವಿನಲ್ಲಿ ನಂಬಿಕೆಯನ್ನಿಟ್ಟು ಅದೇ ದೇವರೆಂದು ತನ್ನಲ್ಲಿ ಹುದುಗಿ ಕೊಂಡಿದ್ದ ಭಕ್ತಿಯನ್ನು ಬೆಳಿಸಿಕೊಳ್ಳುವದಕ್ಕಾಗಿ ಮೊದಲು ತಾನು ತನ್ನ ಕಣ್ಣಿಗೆ ಕಾಣಿಸುವಂಥ ಮೂರ್ತಿಯನ್ನು ಆರಾಧನೆಮಾಡುವದು ಸ್ಥೂಲಬುದ್ಧಿಗೆ ಉಚಿತವಾದದ್ದು. ಯಾಕಂದರೆ ಸ್ಥೂಲಬುದ್ಧಿಯ ಮಾನವನು ಮೊಟ್ಟಮೊದಲು ಕಣ್ಣಿಗೆ ಕಾಣುವ ಒಂದಾನೊಂದು ವ್ಯಕ್ತಿಯಲ್ಲಿ ಚಿತ್ತವಿಟ್ಟು ತನ್ನ ಭಕ್ತಿಸ್ಥಿರತೆಯನ್ನು ಮಾಡಿಕೊಳ್ಳದಹೊರತು ಅವನಿಗೆ ನಿಜವಾದ ಭಕ್ತಿಯುತ್ಪನ್ನವಾಗಲಾರದು. ಹಾಗೆ ಅವನು ಮಾಡುವದರಿಂದಲೇ ಅವನಲ್ಲಿ ಬರಬರುತ್ತ ಮಾನಸಿಕ ಸ್ಥಿರತೆಯುಂಟಾಗಿ ಜಗತ್ತಿನ ಮತ್ತು ಮೂಲ ವಸ್ತುವಿನ ನಿಜವಾದ ಜ್ಞಾನವಾಗುವದು. ಆಮೇಲೆ ನಶ್ವರವಾದದ್ದಾವುದು? ಶಾಶ್ವತವಾದದ್ದಾವುದು? ಎಂಬ ಸತ್ಯಕಲ್ಪನೆಯು ಅವನಲ್ಲಿ ಹೊಳೆದು ತನ್ನತಾನರಿಯಲು ಸಮರ್ಥನಾಗುತ್ತಾನೆ. ಕಾರಣ ಜಗತ್ತಿನ ಜ್ಞಾನ ವಾಗದ ಮಂದ ಬುದ್ಧಿಯ ಮನುಜನು ಮೊದಲು ಮೂರ್ತಿರೂಪ ಪೂಜೆಯನ್ನು ಮಾಡುವದು ವ್ಯರ್ಥವಲ್ಲ. ಆ ಮೂಲಕವಾಗಿ ಅವನಲ್ಲಿ ಭಕ್ತಿವೃಕ್ಷವು ಪ್ರಫುಲ್ಲಿತವಾಗುವದು.

**ಶಿಷ್ಯ:—** ಗುರುವೆ ಇಷ್ಟಲಿಂಗದ ಮತ್ತು ಉಳಿದ ದೇವರುಗಳ ಪೂಜೆಯಲ್ಲಿ ಅಂತರವೇನು?

**ಗುರು:—** ಶಿಷ್ಯನೇ ಕೇಳು. ಕೆಲವು ಜನರು ಕೂಡಿ ಒಂದು ಸ್ಥಳವನ್ನು ಪವಿತ್ರವಾದದ್ದೆಂದು ತಿಳಿದುಕೊಂಡು ಆ ಸ್ಥಳದಲ್ಲಿ ಒಂದು ಮಂದಿರವನ್ನು ನಿರ್ಮಿಸಿ ಅದರಲ್ಲಿ ಒಂದು ಆಕಾರದ ಮೂರ್ತಿಯನ್ನು

ದೇವರೆಂದು ಹೆಸರಿಟ್ಟು ಸ್ಥಾಪಿಸಿಕೊಳ್ಳುವರು. ಇಂಥ ದೇವರಿಗೆಲ್ಲ ಸ್ಥಾವರ ಮೂರ್ತಿಗಳೆಂದು ಹೆಸರು. ಅವರೆಲ್ಲರೂ ಅದಕ್ಕೆ ಶಿಷ್ಯರಾಗಿ ನಡೆದು ಕೊಳ್ಳುವರು. ಮತ್ತು ಮೇಲಿಂದಮೇಲೆ ಒಬ್ಬೊಬ್ಬನೆ ಹೋಗಿ ಆ ಮೂರ್ತಿಯ ಎದುರಿನಲ್ಲಿ ನಿಂತುಕೊಂಡು, ಈತನು ಜಗನ್ನಿರ್ಮಾಣ ಕರ್ತನೂ, ಪೂಜ್ಯನೂ ಆಗಿದ್ದಾನೆ. ನಾನು ಈತನಿಂದ ಜಗತ್ತಿನಕೂಡ ಹುಟ್ಟಿದವನೂ ಪೂಜಕನೂ ಆಗಿದ್ದೇನೆ. ಈತನು ಬೇರೆ ನಾನು ಬೇರೆ. ಈತನನ್ನು ಪೂಜಿಸಿ ಇವನ ಕೃಪೆಯನ್ನು ಪಡೆದು ಸುಖಿಯಾಗುವೆನು." ಎಂದು ಯಾವಾಗಲೂ ಈತನ ಚಿಂತೆ ಮಾಡುತ್ತಿರುವನು. ಹೀಗೆ ಸಾವಿರಾರು ಜನರು ಒಂದೊಂದು ಗುಡಿಗೆ ಹೋಗಿ ದೇವರನ್ನು ಮರೆ ಬೀಳುವರು. ಒಬ್ಬನು ಪೂಜೆ ಮಾಡುವವರೆಗೂ ಇನ್ನೊಬ್ಬನಿಗೆ ಅರ್ಚಿಸಲು ಅನುವು ದೊರೆಯುವದಿಲ್ಲ. ಮೊದಲಿನವನು ತನ್ನ ಪೂಜೆಯನ್ನು ಮುಗಿಸಿ ಬದಿಗಾದಮೇಲೆ ಮತ್ತೊಬ್ಬನು ಅದೇದೇವನನ್ನು ಪೂಜೆ ಮಾಡಲು ಸಮರ್ಥ ನಾಗುವನು. ಯಾಕಂದರೆ ಮಾಡಿಟ್ಟ ಮೂರ್ತಿಯು ಒಂದೇ ಇರುವದು. ಅದು ದೇವರೆಂಬ ಕಲ್ಪನೆಯುಳ್ಳವರು ಸಾವಿರಾರು ಜನರು. ಬಹುಜನಗಳಿಗೆಲ್ಲ ಒಂದೇ ದೇವರಿರುವಾಗ್ಗೆ ಸರ್ವರಿಗೂ ಏಕಕಾಲದಲ್ಲಿಪೂಜೆ ಮಾಡಲು ಅನುವು ದೊರೆಯಲು ಅವಕಾಶವೆಂತು ? ಒಬ್ಬನು ಅಹೋರಾತ್ರಿ ದೇವರ ಪೂಜೆ ಯಲ್ಲಿಯೇ ಕಾಲಕಳೆಯುವೆನೆಂಬ ಆಸಕ್ತಿಯಿಂದ ಅವನುಪೂಜಿಸಲು ಪ್ರಾರಂಭಿಸಿದರೆ ಇನ್ನೊಬ್ಬನಿಗೆ ದೇವರು ದೊರಕಲು ಸಾಧ್ಯವಿಲ್ಲದಂತಾಗು ವದು.ಆಗ್ಗೆ ಅವನು ತನ್ನಷ್ಟಕ್ಕೆ ತಾನೊಂದು ಸ್ವತಂತ್ರ ದೇವರನ್ನು ಸ್ಥಾಪಿಸಿ ಕೊಂಡರೆ ಅವನ ಅರ್ಚನೆಗೆ ಅನುಕೂಲವಾಗುವದು. ಹೀಗೆ ಅನೇಕರು ದೇವರನ್ನು ಪೂಜೆಗಾಗಿ ಬಯಸಿದರೆ ಅವರೆಲ್ಲರೂ ಅನೇಕ ದೇವರನ್ನು ಕಲ್ಪಿ ಸಿಕೊಳ್ಳಬೇಕು. ಅಂದರೇನೇ ಆಯಾಯಕಾಲಕ್ಕೆ ದೇವರ ಬಗ್ಗೆ ವುಂಟಾದ ಅವರ ಪ್ರೇಮವು ಅವರವರ ಪೂಜೆಯಿಂದ ಪೂರ್ಣಗೊಳ್ಳುವದು. ಹೀಗೆ ಮಾಡಿದರೂ ಸಹ ಏನಾದರೊಂದು ಕಾರಣದ ನಿಮಿತ್ಯ ಆತನು ಬೇರೊಂದು ಸ್ಥಳಕ್ಕೆ ದೂರ ಪ್ರಯಾಣಮಾಡಿದ್ದಾದರೆ ಆತನಿಗೆ ಅಲ್ಲಿ ದೇವ ಪೂಜೆಯು ಸಂಭವಿಸುವಂತಿಲ್ಲ. ಯಾಕಂದರೆ ಆತನಿಗೆ ಅಲ್ಲಿ ದೇವರಿರುವ ದಿಲ್ಲ. ಪುನಃ ಅವನು ಮೊದಲು ಸ್ಥಾಪಿಸಿದ ದೇವರ ಸ್ಥಳಕೆ ಬಂದರೇನೇ ಅವನಿಗೆ ದೇವರು ದೊರಕುವನು. ಹೀಗಾಗಿ ಆತನ ಭಾವನೆಯಲ್ಲಿ ದೇವರು

ಜಗತ್ತಿನ ತುಂಬ ಇರುವನೆಂಬ ಕಲ್ಪನೆಗೆ ಅವಕಾಶ ದೊರೆಯಲು ಸಾಧ್ಯ ವಿಲ್ಲ. ಹಾಗಿಲ್ಲದಿದ್ದಲ್ಲಿ ಅವನು ಹೋದಹೋದಲ್ಲೆಲ್ಲ ದೇವರು ಅವನಿಗೆ ದೊರೆದು ಅಲ್ಲಿಯೇ ಅವನ ಪೂಜಾ ಪ್ರೇಮವು ವಿಕಾಸವಾಗುತ್ತಿದ್ದಿತು. ಆದರೆ ಇಷ್ಟಲಿಂಗದ ಪೂಜೆಯು ಮಾತ್ರ ಹಾಗಲ್ಲ. ಸ್ವತಂತ್ರನಾದ ದೇವರು ಜಗತ್ತಿಗೆ ಒಬ್ಬನೇ ಒಬ್ಬನು. ಗಗನಮಂಡಲದಲ್ಲಿ ಥಳಥಳ ಹೊಳೆಯುವ ಸೂರ್ಯನೊಬ್ಬನೇ ಇದ್ದರೂ ಸಾವಿರಾರು ಜಲಪೂರಿತ ಕುಂಭಗಳೊಳಗೆ ಅಸಂಖ್ಯನಾಗಿ ತೋರುವಂತೆ ದೇವನು ಪ್ರಾಣಿ ಮಾತ್ರದ ದೇಹದೊಳಗೆ ಚೇತನಸ್ವರೂಪನಾಗಿ ಅಸಂಖ್ಯನಾಗಿದ್ದಾನೆ. ಪ್ರಾಣ ಇದ್ದಲ್ಲೆಲ್ಲ ಚೇತನ ಶಕ್ತಿಯು ಇದ್ದೇ ಇರುವದು. ಅದೇ ಮೂಲವಸ್ತುವು. ಅದನ್ನೇ ಯೋಗ ಶಕ್ತಿಯಿಂದ ಗುರುದೇವನು ಈ ಇಷ್ಟಲಿಂಗದಲ್ಲಿ ಇಟ್ಟುಕೊಟ್ಟಿದ್ದಾನೆ. ಆ ಸ್ವತಂತ್ರ ಶಕ್ತಿಯನ್ನು ಮಾನವನು ಪೂಜೆಮಾಡುತ್ತಾನೆ. ಅಂಕುರಕ್ಕೆ ಬೀಜವು ಆಧಾರವಾದಂತೆ ಸ್ವತಂತ್ರ ಶಕ್ತಿಗೆ ಈ ಇಷ್ಟಲಿಂಗವು ಆಧಾರ ವಾಗಿರುವದು. ಅರೂಪವಾದ ತೇಜಸ್ಸಿಗೆ ದೀಪದ ಕಡ್ಡಿಯು ಹ್ಯಾಗೆ ಆಧಾ ರವೋ ಹಾಗೆ ರೂಪರಹಿತವಾದ ಸ್ವತಂತ್ರ ಶಕ್ತಿಗೆ ಈ ಕಲೆಯು ಆಧಾರ ವಾಗಿರುವದು. ಈ ಶಿಲೆಯೇ ದೇವರಲ್ಲ. ಶಿಲೆಯೊಳಗಡಗಿದ ಕಲೆಯೇ ದೇವರು. ಮಾನವನು ಸಾಕಾರನಾಗಿದ್ದರಿಂದ ನಿರಾಕಾರವಾದ ಸ್ವತಂತ್ರ ಶಕ್ತಿಯನ್ನು ಸಾಕಾರದೊಡನೆ ಕಾಣಲು ಸಮರ್ಥನಾಗುತ್ತಾನೆ. ಅಂತೆಯೇ ಸಾಕಾರ ನಿರಾಕಾರ ಸ್ಥಿತಿಯುಳ್ಳ ಇಷ್ಟಲಿಂಗದದ್ವಾರ ಜಗನ್ನಿಯಾಮಕನನ್ನು ಕಂಡುಕೊಳ್ಳುವನು. ಮೇಲೆಹೇಳಿದ ಸ್ಥಾವರ ದೇವರ ಪೂಜೆಗೂ ಇಷ್ಟಲಿಂಗದ ಪೂಜೆಗೂ "ಕನ್ನಡಿಯು ಕೈಯೊಳಿರುತಿರೆ। ತನ್ನಯ ಮೊಗನೋಳ್ಪ ಪಿರಿದು ಹಂಬಲ ಸಖಿಗೆ। ಕನ್ನಡಿಯಂ ಮನವೊಲಿಸುವವೋಲ್ ಚನ್ನಾಗಿಯೇ ಮಾಳ್ಪ ಮನವು ಬಡಿಗನಿಗಿಹುದು॥ ಎಂಬಂತೆ ಕನ್ನಡಿಯು ಓರ್ವ ಸ್ತ್ರೀಯಳ ಮತ್ತು ಒಬ್ಬ ಬಡಿಗನ ಕೈಯೊಳಗಿರುವದೆಂದು ಕಲ್ಪಿಸುವಾ. ಅವರಿಬ್ಬರ ಭಾವನೆಯು ಬೇರೆಬೇರೆಯಾಗಿರುವದು. ಸ್ತ್ರೀಯಳು ತನ್ನ ಹಾವಭಾವ ಗಳನ್ನು ಕಾಣಬೇಕೆಂಬ ಕಲ್ಪನೆಯುಳ್ಳವಳೂ ಬಡಿಗನು ಕನ್ನಡಿಯನ್ನು ಬೆಳೆಯುಳ್ಳದ್ದನ್ನಾಗಿ ಮಾಡಬೇಕೆಂಬ ಕುತೂಹಲವುಳ್ಳವನೂ ಹ್ಯಾಗೆ ಬೇರೆಬೇರೆ ಭಾವನೆಯುಳ್ಳವರಾಗಿವರೋ ಹಾಗೆ ಸ್ಥಾವರ ಮತ್ತು ಇಷ್ಟಲಿಂಗ ದೇವರುಗಳ ಪೂಜೆಯಲ್ಲಿ ಅಂತರವುಂಟು.

**ಶಿಷ್ಯ:**— ಗುರುವೇ ಇಷ್ಟಲಿಂಗವು ಸಾಕಾರ ನಿರಾಕಾರವಾಗಿ ರುವುದೆಂದು ಹೇಳದಿರಲ್ಲಾ. ಅದು ಹೇಗೆ ?

**ಗುರು:**— ಶಿಷ್ಯನೇ ಕೇಳು ಇಷ್ಟಲಿಂಗವಿದು.  ಹೊರಗೆ ಕಾಣುವ ಸ್ವರೂಪಕ್ಕೆ ಆಕಾರವಿಲ್ಲ. ಅಂದರೆ ಜಗತ್ತಿನೊಳಗಿನ ಯಾವ ದಾದರೂ ಒಂದು ಮೂರ್ತಿಸ್ವರೂಪವುಳ್ಳದ್ದಲ್ಲ. ನಿರಾಕಾರವಾಗಿರುವದು. ಒಳಗೆ ಮಾತ್ರ ಒಂದು ಬಗೆಯ ಚಿತ್ರ ಕಾಣುವದು. ಅದು ತನ್ನ ಮೂಲ ರೂಪದಿಂದ ಜಗತ್ತಿನ ರೂಪವನ್ನು ಹೇಗೆ ತಾಳಿತೆಂಬ ಸ್ವರೂಪವನ್ನು ತಿಳಿಸಿ ಕೊಡುವಂತಹದಾಗಿರುತ್ತದೆ.

**ಶಿಷ್ಯ:**— ಗುರುವೇ ಅದು ಹೇಗೆ ? ಚನ್ನಾಗಿ ತಿಳಿಸಬೇಕು.

**ಗುರು:**— ಶಿಷ್ಯನೇ ನಿರಾಕಾರ ನಿಶ್ಶೂನ್ಯ ಸ್ವರೂಪವಾದದ್ದು ಇದು ○. ಪರಮಾತ್ಮ, ಸತ್, ಚಿತ್, ಆನಂದ ಸ್ವರೂಪವುಳ್ಳ ▽ ಆತ್ಮ ಪುರುಷವು. ಸತ್ವ, ರಜ, ತಮ ಗಳೆಂಬ ತ್ರಿಗುಣಾತ್ಮಕವಾದ △ ಈ ಸ್ವರೂಪವುಳ್ಳದ್ದು ಪ್ರಕೃತಿಯು. ಈ ಉಭಯ ಪುರುಷ ಮತ್ತುಪ್ರಕೃತಿಗಳ ಸಮ್ಮೇಳನದಿಂದ ಬ್ರಹ್ಮಾಂಡ ಸ್ವರೂಪ ವಿಶ್ವವು ಗೋಮುಖದ್ವಾರ ಉದ್ಭವಿಸಿತು. ಅಂದರೆ ಎಲ್ಲಕ್ಕೂ ಮೊದಲು ○ ನಿರಾಕಾರವು. ಅದರ ಸಾಮಿಪ್ಯದಲ್ಲಿ ▽ ಪುರುಷ ಬ್ರಹ್ಮವು. ಜಗದುತ್ಪತ್ತಿ ಸ್ಫುರಣವಾದಾಗ್ಗೆ △ ಪ್ರಕೃತಿಯ ನೆನವು. ಆ ಕೂಡಲೇ ⧖ ಬ್ರಹ್ಮಾಂಡ ನಿರ್ಮಾಣರೂಪ ಲಿಂಗವು ಪ್ರಕಟವಾಯಿತು.

ಇದೆಲ್ಲವೂ ಯಾವಾಗಲೂ ಅವಿನಾಭೂತದಿಂದ  ಪರಮಾತ್ಮ ನೊಳಗೆ ಅಡಕವಾಗಿರುವದು. ಇದರಂತೆ ನಿರಾಕಾರ ಲಿಂಗದೊಳಗೆ ಸಾಕಾರ ರೂಪ ಲಿಂಗವು ಉಂಟು. ಸಾಕಾರನಾದ ಜೀವನು ತಾನು ನಿರಾಕಾರ ಸ್ವರೂಪನಾಗಬೇಕಾದರೆ ಮೇಲೆ ಹೇಳಿದಂತೆ ಈ ಇಷ್ಟಲಿಂಗದ ಉಪಾಸನೆ ಯನ್ನು ಮಾಡಬೇಕು.

**ಶಿಷ್ಯ:**— ಗುರುವೇ ಈ ಸಣ್ಣದಾದ ಇಷ್ಟಲಿಂಗದೊಳಗೆ ಜಗದ್ವ್ಯಾಪಿಯಾದ ದೊಡ್ಡ ವಸ್ತುವು ಇರುವ ಬಗೆ ಹೇಗೆ? ಆದ್ದರಿಂದ ಅದನ್ನು ಕಾಣುವ ಬಗೆ ಎಂತು ?

**ಗುರು:—** ಶಿಷ್ಯನೇ ಕೇಳು. ಆಲದ ಬೀಜವನ್ನು ನೀನು ನೋಡಿರುವಿ. ಅದು ಸಾಸಿವೆಯ ಕಾಳಿನಷ್ಟು ಸಣ್ಣದಿರುವದಲ್ಲವೇ? ಅದರಲ್ಲಿ ಅತಿ ಎತ್ತರವಾಗಿಯೂ, ವಿಸ್ತಾರವಾಗಿಯೂ ಬೆಳೆಯುವ ಆಲದ ಮರವು ಅಡಕಾಗಿರುವದಲ್ಲವೇ? ಮತ್ತು ಒಂದು ಅರಮನೆಯೊಳಗೆ ಕನ್ನಡಿಯು ತೂಗಾಡುತ್ತಿರುವದು. ಅದು ಆ ಅರಮನೆಯ ಒಂದು ಭಾಗದೊಳಗಿರುತ್ತಿದ್ದರೂ ದೊಡ್ಡದಾದ ಅರಮನೆಯನ್ನೆಲ್ಲ ತನ್ನೊಳಗೆ ತೋರುತ್ತಿರುವದಲ್ಲವೇ? ಇದೂ ಅಲ್ಲದೆ ಜಗತ್ತಿನ ಒಂದು ಮೂಲೆಯಲ್ಲಿ ಇರುತ್ತಿರುವ ಸಣ್ಣದಾದ ಪೃಥ್ವಿಯ ಗೋಲಿನಿಂದ ವಿಸ್ತಾರವಾದ ಜಗತ್ತಿನ ಜ್ಞಾನವನ್ನು ತಿಳಿದುಕೊಳ್ಳುವಿ. ಅದರಂತೆ ಇಷ್ಟಲಿಂಗವು ನಿನಗೆ ಸಣ್ಣದಾಗಿ ಕಂಡರೂ ಪೃಥ್ವಿಯ ಗೋಲಿನಂತೆ ನಿನಗೆ ಪರಮಾತ್ಮನ ಜ್ಞಾನವನ್ನುಂಟು ಮಾಡಿ ಕೊಡಲು ಸಾಧನವಾಗಿರುವದು.

“ಲೀಯತೆ ಗಮ್ಯತೆಯತ್ರ ಜಗದೇ ತಚ್ಚರಾಚರಂ || ಪುನ: ಪುನ: ಸಮುತ್ಪತ್ತಿಂತಲ್ಲಿಂಗಂ ಬ್ರಹ್ಮಶಾಶ್ವತಂ || ಎಂಬಂತೆ ಇದರಲ್ಲಿ ‘ಜಗತ್ತು ಅಡಕವಾಗಿದೆ. ಇದರಿಂದ ಜಗತ್ತಿನ ಉತ್ಪತ್ತಿಯಾಗುವದು. ಇದೇ ನಿಜವಾದ ವಸ್ತುವು, ಎಂದು ಚನ್ನಾಗಿ ನಂಬಿ ಇದನ್ನು ಪೂಜಿಸಿ ನಿನ್ನ ನಿಜಸ್ಥಿತಿಯನ್ನು ನೀನು ಕಂಡುಕೊಳ್ಳು.

**ಶಿಷ್ಯ:—** ಗುರುವೇ ನನ್ನೊಳಗಿರುವ ಸ್ವತಂತ್ರ ಶಕ್ತಿಯು ನನಗೆ ಕಾಣಿಸದು. ಅದನ್ನು ನಾನು ಪೂಜಿಸುವ ಬಗೆ ಹೇಗೆ?

**ಗುರು:—** ಶಿಷ್ಯನೇ ಮೇಸ್ ಮೇರಿಝಂ
ಅಂದರೆ ಜರ್ಮನ್ ದೇಶದ ವೈದ್ಯನಾದ ಮೆಸ್‌ಮೇರ ನೆಂಬುವವನು ಕ್ರಿ. ಶ. ೧೭೭೮ ರಲ್ಲಿ ಒಂದು ಪ್ರಯೋಗವನ್ನು ಕಂಡುಹಿಡಿದಿದ್ದಾನೆ. ಅದಕ್ಕೆ ಮೇಸ್ ಮೇರಿಝಂ ಎಂದು ಹೆಸರು. ಒಂದು ವ್ಯಕ್ತಿಯ ಪ್ರಾಣಕಲೆಯನ್ನು ದೃಷ್ಟಿಯ ಮೂಲಕ ಬೇರೊಬ್ಬ ವ್ಯಕ್ತಿಯು ತೆಗೆದುಕೊಳ್ಳುವದು. ಇದು ನಿನಗೆ ಗೊತ್ತಿರಬಹುದು. ಅದರಂತೆ ನಮ್ಮ ಪೂರ್ವಿಕರು ಶಿಷ್ಯನ ಪ್ರಾಣಕಲೆಯನ್ನು ಯೋಗಬಲದಿಂದ ಗುರುವು ತೆಗೆದುಕೊಂಡು ಈ ನಿನ್ನ ಇಷ್ಟಲಿಂಗದಲ್ಲಿ ಸಂಬಂಧಿಸಿ ಕೊಟ್ಟಿರುತ್ತಾನೆ.

ಅದನ್ನು ಈ ಕೆಳಗಿನ ಸಂಗತಿಯಿಂದ ನೀನು ಮನವರಿಕೆಯನ್ನು ಮಾಡಿಕೊಳ್ಳು. ‘ ಕಾಣದ ಬೆಂಕಿಯು ಯತ್ನದಿ । ಜಾಣನು ತಾಂ ಕಡ್ಡಿ ತುದಿಯೊಳಿರಿಸುವ ತೆರದಿ ॥ ಕಾಣದ ದೇವನ ಗುರು ಕರ । ತಾಣದೊಳಿರುವಿಷ್ಟಲಿಂಗದೊಳು ಬೆರೆಸಿರ್ಕು೯೦ ॥ ಎಂಬಂತೆ. ಬೆಂಕಿಯು ನಮಗೆ ಅವಶ್ಯವಾಗಿ ಬೇಕಲ್ಲವೇ ? ಅದಿಲ್ಲದೆ ನಮ್ಮ ವ್ಯವಹಾರವು ನಡೆಯಲು ಸಾಧ್ಯವಿಲ್ಲ. ಬೆಂಕಿಯು ರೂಪವುಳ್ಳ ಪದಾರ್ಥವಲ್ಲ. ಅದು ಕಾಣದ ವಸ್ತುವಾದರೂ ಅದನ್ನು ವಿಜ್ಞಾನತತ್ವವೇತ್ತರು ನಮಗೆ ಅದರ ಉಪಯೋಗವಾಗಬೇಕೆಂದು ದೀಪದ ಕಡ್ಡಿಯ ತುದಿಯಲ್ಲಿ ಅದನ್ನು ಇಟ್ಟುಕೊಟ್ಟಿದ್ದಾರೆ. ಆ ಇಟ್ಟುಕೊಟ್ಟ ಬೆಂಕಿಯು ಕಾಣುವದೋ ? ಇಲ್ಲ. ಹಾಗಾದರೆ ಇಲ್ಲೆನ್ನಬಹುದೋ ? ಅನ್ನಲಾಗದು. ಯಾಕಂದರೆ ಕಡ್ಡಿಯನ್ನು ಕೆರೆದೊಡೆ ತುದಿಯೊಳಗೆ ಹುದುಗಿಕೊಂಡಿದ್ದ ಬೆಂಕಿಯು ಪ್ರಕಟವಾಗುವದು. ಕಡ್ಡಿಯನ್ನು ಸುಡುವ ಶಕ್ತಿಯು ಬೆಂಕಿಯಲ್ಲಿ ಉಂಟು. ಕಡ್ಡಿಯನ್ನು ಸುಡದಂತೆಯೂ ಬೇಕಾದ ಸಮಯದಲ್ಲಿ ಜನೋಪಯೋಗವಾಗುವಂತೆಯೂ ವಿಜ್ಞಾನತತ್ವವೇತ್ತರು ಬೆಂಕಿಯನ್ನು ಕಡ್ಡಿಯ ತುದಿಯಲ್ಲಿ ಇಟ್ಟಿರುವರಲ್ಲವೇ, ಅದರಂತೆ ಆರೂಪ ವಸ್ತುವಾದ ಆತ್ಮಕಲೆಯನ್ನು ಈ ನಿನ್ನ ಕರ ಕಮಲದಲ್ಲಿದ್ದ ಇಷ್ಟಲಿಂಗದಲ್ಲಿ ಗುರುವು ತಂದಿರಿಸಿದ್ದಾನೆ.

**ಶಿಷ್ಯಃ**— ಗುರುವೇ ಕಡ್ಡಿಯ ಕೊನೆಗಿರುವ ಅಗ್ನಿಯು ನಮಗೆ ಕಾಣುವಂತೆ ಈ ಇಷ್ಟಲಿಂಗದೊಳಗಿದ್ದ ಸ್ವತಂತ್ರ ಶಕ್ತಿಯು ನಮಗೆ ಕಾಣುವದಿಲ್ಲವೇಕೆ ?

**ಗುರುಃ**— ಶಿಷ್ಯನೇ ನೀನು ಅಜ್ಞಾನಿಯಿರುವಿ. ಜ್ಞಾನದಿಂದ ನೀನು ದೊಡ್ಡವನಾಗಬೇಕು. ಏನೂ ಅರಿಯದ ಬಾಲಕನಿಗೆ ಕಡ್ಡಿಯತುದಿಯೊಳಗಿರುವ ಬೆಂಕಿಯ ಜ್ಞಾನವು ಇಲ್ಲದೇ ಇರುವದರಿಂದ ಅದನ್ನು ಬಾಯೊಳಗೆ ಹಾಕುತ್ತಾನೆ. ಯಾಕಂದರೆ ಕಡ್ಡಿಯ ಕೊನೆಗಿರುವ ಬೆಂಕಿಯ ಜ್ಞಾನವು ಆತನಿಗಿರುವದಿಲ್ಲ. ತುಸು ದೊಡ್ಡವನಾದ ಬಳಿಕ ಕಡ್ಡಿಯನ್ನು ಕೆರೆದರೆ ಅದರಲ್ಲಿ ಬೆಂಕಿ ಉತ್ಪನ್ನವಾಗುವದೆಂಬ ಜ್ಞಾನವು ಅವನಿಗೆ ಹುಟ್ಟುವದಲ್ಲವೇ ? ಆ ಮೇಲೆ ಕಡ್ಡಿಯಂದರೇನು ? ಬೆಂಕಿಯೆಂದರೇನು ?

ಎಂಬ ತಿಳುವಳಿಕೆಯು ಅವನಿಗೆ ಹುಟ್ಟುವಂತೆ ದೇಹವೆಂದರೇನು? ಆತ್ಮ ವೆಂದರೇನು? ಎಂಬ ವಿವೇಚನೆಯನ್ನು ಚನ್ನಾಗಿ ಅರಿತಮೇಲೆ ನಿನಗೆ ಇಷ್ಟಲಿಂಗದಲ್ಲಿ ಆತ್ಮಕಲೆಯ ಸ್ಥಿರತೆಯು ತಿಳಿದು ಬರುವದು.

**ಶಿಷ್ಯ:**— ಗುರುವರ್ಯನೇ ಇಷ್ಟಲಿಂಗದೊಳಗೆ ಆತ್ಮಕಲೆಯುಂಟೆಂಬ ಬಳಿಕ ಈ ಇಷ್ಟಲಿಂಗವನ್ನು ಬಿಟ್ಟು ಒಳಗಿರುವ ಆತ್ಮಕಲೆಯನ್ನೇ ಯಾಕೆ ಪೂಜಿಸಬಾರದು ?

**ಗುರು:**— ಶಿಷ್ಯನೇ ಕೇಳು || ತನ್ನಯ ಮೊಗವಂತಾನೆ || ಕನ್ನಡಿಯಂ ಕರದಿ ಪಿಡಿದು ನೋಡುವ ತೆರದಿ || ಪನ್ನಂಗಧರನು ತಾನಿರೆ || ತನ್ನಂ ಕಾಣಲ್ಕೆಬೇಕು ಕರದಿಷ್ಟವು ಕೇಳ್ || ಎಂಬಂತೆ ಮನುಷ್ಯನು ತನ್ನ ಮುಖವನ್ನು ತಾನು ಕಾಣಬೇಕಾದರೆ ಕನ್ನಡಿಯನ್ನು ತನ್ನ ಕೈಯೊಳಗೆ ತಾನು ಹಿಡಿದು ನೋಡಿದರಲ್ಲವೇ ಕಾಣುವದು. ಅದೇಪ್ರಕಾರ ಜೀವನು ಪರವಸ್ತುವಿನ ಅಂಶಿಗನಾದರೂ ತನ್ನ ನಿಜವನ್ನುತಾನು ಅರಿಯ ಬೇಕಾದರೆ ಇಷ್ಟಲಿಂಗವು ಬೇಕೇಬೇಕು. ಈ ಇಷ್ಟಲಿಂಗದ ಹೊರತು ತನ್ನ ತಾನರಿಯನು. ಯಾಕಂದರೆ ದೇಹವು ಸ್ಥೂಲ, ಸೂಕ್ಷ್ಮ,ಕಾರಣಗಳೆಂದು ಮೂರು ಬಗೆಯಾಗಿರುವದು. ಸ್ಥೂಲ ದೇಹಕ್ಕೆ ಹೊಂದಿಕೊಂಡು ಸೂಕ್ಷ್ಮ ದೇಹವೂ ಸೂಕ್ಷ್ಮಕ್ಕೆ ಹೊಂದಿಕೊಂಡು ಕಾರಣ ಶರೀರವೂ ಇರುವದುಂಟು. ಈ ಮೂರೂ ದೇಹಗಳು ಒಂದು ಕ್ಷಣ ಸಹ ಒಂದನ್ನೊಂದು ಅಗಲಿ ಇರಲಾರವು. ಇವುಗಳ ಅಗಲುವಿಕೆಯೆಂದರೆ ಜೀವನ ಅಂತಿಮಾವಸ್ಥೆಯೇ ಸರಿ. ಜೀವನ ವ್ಯವಹಾರ ಸಾಗಬೇಕಾದರೆ ಕಣ್ಣಿಗೆ ಕಾಣುವ ಈ ಸ್ಥೂಲ ದೇಹವು ಅವಶ್ಯವಾಗಿ ಬೇಕು. ಇದು ಇದ್ದಮೇಲೆ ಇದಕ್ಕೆ ಹೊಂದಿಕೊಂಡು ಉಳಿದೆರಡು ದೇಹಗಳು ಇದ್ದೇ ಇರುವವು. ಸ್ಥೂಲ ದೇಹವನ್ನು ಬಿಟ್ಟು ಸೂಕ್ಷ್ಮ, ಕಾರಣ ದೇಹಗಳ ಅಸ್ತಿತ್ವವೇ ಇರುವದಿಲ್ಲ. ಅಂದಮೇಲೆ ಸ್ಥೂಲ, ಸೂಕ್ಷ್ಮ, ಕಾರಣ ಈ ಮೂರು ದೇಹಗಳು ಜೀವನಿಗೆ ಹೇಗೆ ಅವಶ್ಯವಾಗಿ ಬೇಕೋ ಅದರಂತೆ ಮೂರು ದೇಹಗಳಿಗೂ ಮೂರು ಲಿಂಗಗಳು ಅವಶ್ಯವಾಗಿ ಬೇಕು. ಸ್ಥೂಲ ದೇಹಕ್ಕೆ ಇಷ್ಟಲಿಂಗವೂ, ಸೂಕ್ಷ್ಮ ದೇಹಕ್ಕೆಪ್ರಾಣಲಿಂಗವೂ, ಕಾರಣ ಶರೀರಕ್ಕೆ ಭಾವಲಿಂಗವೂ ನಿತ್ಯ ಸಂಬಂಧಿಗಳಾಗಿವೆ. ಸ್ಥೂಲ ದೇಹ ದಿಂದ ನಮಗೆ ಸೂಕ್ಷ್ಮದೇಹದ ಅರಿವು ಆಗುವಂತೆ ಇಷ್ಟಲಿಂಗದಿಂದ ಪ್ರಾಣ

ಲಿಂಗದ ನೆನಪಾಗುವದು. ಪ್ರಾಣಲಿಂಗದ ನೆನಹಿನ ಬಲದಿಂದ ಭಾವಲಿಂಗದ ಜ್ಞಾನವುಂಟಾಗುವದು. ಎರೆಯಲ್ ನೀರಂ ತಳದೋಳ್ | ಭರದಿಂದೆಲೆ ಹೂವುಕಾಯಿ ಭಾಗಂಗಳಿಗೆ || ನೆರೆಮುಟ್ಟುವವೋಲ್ಮನುಜನ | ಕರಪೂಜೆಯು ಪ್ರಾಣಭಾವ ಲಿಂಗಕೆ ಸಾರ್ಚುಂ || ಎಂಬಂತೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳ ಸಂಬಂಧವು ಸ್ವಭಾವನಿರ್ಮಿತವಾಗಿರುವದು. ಪ್ರಾಣ, ಭಾವಲಿಂಗಗಳು ಕಣ್ಣಿಗೆ ಕಾಣದ ವಸ್ತುಗಳು. ಮಾನವನು ತಾನು ಸಾಕಾರ ನಾಗಿದ್ದಾನೆ. ಮೊದಲು ತಾನು ಕಾಣುವ ವಸ್ತುವಿನ ಸಹಾಯದಿಂದ ಕಾಣದ ವಸ್ತುವನ್ನು ಅರಿತುಕೊಳ್ಳಬೇಕು. ಒಮ್ಮೆಲೇ ತಾನು ಅರಿಯದ ವಸ್ತುವನ್ನು ಅರಿತುಕೊಳ್ಳಲು ಅವನಿಗೆ ಎಂದೂ ಸಾಧ್ಯವಿಲ್ಲ. ಹೊಗೆ ಬೆಂಕಿಗಳ ಪರಸ್ಪರ ಸಂಬಂಧವನ್ನು ಪ್ರತ್ಯಕ್ಷ ಕಂಡವನಾದ್ದರಿಂದ ಹೊಗೆ ಕಂಡಲ್ಲೆಲ್ಲ ಬೆಂಕಿ ಇರುವದೆಂಬ ಜ್ಞಾನವು ಅವನಿಗೆ ಸ್ಥಿರವಾದದ್ದು. ಬೆಂಕಿ ಹೊಗೆಗಳ ಸಂಬಂಧವನ್ನೇ ಅವನು ಅರಿಯದಿದ್ದಲ್ಲಿ ಬೆಂಕಿಯ ಇರವನ್ನು ಅವನು ಕಾಣದಿರುವಂತೆ ಇಷ್ಟಲಿಂಗದ ಸಹಾಯವನ್ನು ಬಿಟ್ಟು ಉಳಿದೆರಡು ಲಿಂಗಗಳ ಇರವನ್ನು ಅವನು ಎಂದೂ ಕಂಡುಕೊಳ್ಳಲಾರನು. ಅಂಗತ್ರಯವುಳ್ಳವಮೂ | ರಂಗದಿ ಮೂರ್ಲಿಂಗಗಳನು ಧರಿಸಲುಬೇಕು | ಅಂಗತ್ರಯಂಗಳೊಂದೊಂ | ದಂಗಗಳೇ ಬೇರೆ ಬೇರೆ ತಾವಿಲ್ಲವು ಕೇಳ್ || ಎಂಬಂತೆ ಮೂರು ದೇಹಗಳ ಸಂಬಂಧವು ಹೇಗೆ ನಿತ್ಯವೋ ಹಾಗೆ ಮೂರು ಲಿಂಗಗಳ ಸಂಬಂಧವಾದರೂ ನಿತ್ಯವೇ ಸರಿ. ಕಾರಣ ಇಷ್ಟಲಿಂಗದ ಸಹಾಯದಿಂದ ಪ್ರಾಣ, ಭಾವಲಿಂಗಗಳ ಅರಿವು ಆಗುವದೇ ಹೊರತು ಕೇವಲ ಕಾಣದ ಪ್ರಾಣ ಭಾವಲಿಂಗಗಳ ಅರಿವು ತನ್ನಿಂದ ತಾನೇ ಎಂದೂ ಸಾಧ್ಯವಾಗಲಾರದು. ಅಕ್ಕಿ ನೀರುಗಳ ಮಿಶ್ರಣವನ್ನು ಅಗ್ನಿಯ ಮೇಲಿಟ್ಟು ಉಂಟಾಗುವ ಅನ್ನದಿಂದ ಹಸಿವೆಯಡಗುವದೆಂದು ಅಂದುಕೊಂಡರೆ ಹಸಿವೆಯ ಬಾಧೆಯಡಗುವದೇ ? ಹಾಗೆ ಕೇವಲ ಓದುವದರಿಂದಾಗಲಿ, ಕೇಳುವದರಿಂದಾಗಲಿ, ಆತ್ಮದಲ್ಲಿ ಪ್ರಾಣಲಿಂಗವುಂಟೆಂದು ತಿಳಿದುಬಂದದ್ದಾದರೆ ಅದರಿಂದುಂಟಾಗುವ ಪ್ರಯೋಜನವೇನು ? ಕಾರಣ ಇಷ್ಟಲಿಂಗವನ್ನು ಅನನ್ಯ ಭಾವದಿಂದ ನೆನೆದರೆ ಪ್ರಾಣ ಭಾವಗಳ ನಿಜವಾದ ಜ್ಞಾನವಾಗುವದು. ಅಂಕುರವು ಬೀಜದೊಳಗಡಗಿದೆಯೆಂದು ತಿಳಿದರೂ ಬೀಜದ ಹೊರತು ಅಂಕುರವು ನಮಗೆ ದೊರೆಯಲು

ಹ್ಯಾಗೆ ಸಾಧ್ಯವಿಲ್ಲವೋ ಅದರಂತೆ ಆತ್ಮಕಲೆಯು ಇಷ್ಟಲಿಂಗದಲ್ಲಿ ಗುರುವಿನಿಂದ ಇಡಲ್ಪಟ್ಟಿದ್ದರೂ ಇಷ್ಟಲಿಂಗದ ಹೊರತು ಆತ್ಮಕಲೆಯನ್ನು ಬೇರ್ಪಡಿಸಿ ನಮಗೆ ನೆನೆಯಲು ಸಾಧ್ಯವಾಗಲಾರದು.

**ಶಿಷ್ಯ:—** ಗುರುವೇ ಇಷ್ಟಲಿಂಗವನ್ನು ಅನನ್ಯ ಭಾವದಿಂದ ನೆನೆಯಬೇಕೆಂದು ಅಪ್ಪಣೆ ಕೊಡಿಸಿದರಲ್ಲಾ. ಅನನ್ಯಭಾವವೆಂದರೇನೆಂಬುವದನ್ನು ಚನ್ನಾಗಿ ಅರುಹಬೇಕು.

**ಗುರುः—**ಶಿಷ್ಯನೇ ಕೇಳು. ಅನ್ಯವೆಂದರೆ ಎರಡನೇದ್ದು. ಅನನ್ಯವೆಂದರೆ ಎರಡನೇಯದಾಗದೇ ಇದ್ದುದು. ಅಂದರೆ ಬೇರೆ ಎಂದು ಭಾವಿಸದಿರುವದು. ಅರ್ಥಾತ್ ತಾನೇ ಎಂಬರ್ಥವು. ಅದು ಹೇಗಂದರೆ ಜಗತ್ತಿನಲ್ಲಿ ಅಸಂಖ್ಯ ಧರ್ಮಗಳುಂಟು. ಆಯಾಯ ಧರ್ಮದವರು ತಮ್ಮ ತಮ್ಮ ಜ್ಞಾನಕ್ಕೆ ಹೊಳೆದಂತೆ ಜಗದಾದಿ ವ್ಯಕ್ತಿಯನ್ನು ಕೆಲವರು ಎದುರಿಟ್ಟುಕೊಂಡು ಅಂದರೆ ತಾನು ಬೇರೆ ಅವನು ಬೇರೆ ಎಂದೂ ಬೇರೆಕೆಲವರು ತನ್ನಿಂದ ಅದುಬೇರೆ ಅಲ್ಲ. ಅದು ತಾನು ಒಂದೇ ಎಂದೂ ಹೀಗೆ ಬೇರೆಬೇರೆ ಭಾವದಿಂದ ಪೂಜಿಸುವರು. ಈ ಒಂದೇ ಎಂಬ ಭಾವದಿಂದ ಪೂಜಿಸುವದೇ ವಿಶ್ವ ಧರ್ಮಿಗಳ ಮಾರ್ಗವು. ಇದನ್ನೇ ನೀನು ಚಿತ್ತವಿಟ್ಟು ಕೇಳು. ಇಷ್ಟಲಿಂಗ ಪೂಜೆಯು ವಿಶ್ವಧರ್ಮಿಗಳಲ್ಲಿ ಸತಿ ಪತಿ ಭಾವದಿಂದ ಸಾಗುವದು. ಇಷ್ಟಲಿಂಗ ಧಾರಿಯಾದ ಜೀವ ( ಶರಣ ) ನೇ ಸತಿಯು. ಇಷ್ಟಲಿಂಗವೇ ಪತಿಯು. ಅಥವಾ ಲಿಂಗಾಂಗ ಸಂಬಂಧವು ಅಂದರೆ ಇಷ್ಟಲಿಂಗಧಾರಕನಾದ ಜೀವನಿಗೆ ಅಂಗವೆಂದೂ ಇಷ್ಟಲಿಂಗಕ್ಕೆ ಲಿಂಗವೆಂದೂ ವಿಶ್ವಧರ್ಮಿಗಳು ನೆನೆಯುವದುಂಟು. ಈ ಲಿಂಗಾಂಗ ಸಂಬಂಧವು ವಿಶ್ವಧರ್ಮಿಗಳಲ್ಲಿ ಜನ್ಮಾರಭ್ಯದಿಂದಲೂ ಜನ್ಮಾಂತ್ಯದವರೆಗೂ ತಪ್ಪಿದ್ದಲ್ಲ. “ ಶರಣನೆ ಸತಿ ಲಿಂಗವೆ ಪತಿ । ಬೆರೆತಿಹುದೀ ಭಾವ ವಿಶ್ವಧರ್ಮದೊಳನಿಶಂ ॥ ನಿರುತಂ ನೆನೆವಳ್ ಸತಿ ತಾಂ। ಪರತರ ಪತಿ ನಾಮವಂಮನದಿ ನುಡಿಯಳು ಪೊರಗೆ ॥ ಎಂಬಂತೆ ಶರಣನು ತನ್ನ ಪತಿಯಾದ ಲಿಂಗ ದೇವನನ್ನು ಅತಿ ಭಕ್ತಿಪೂರ್ವಕವಾಗಿಯೂ ಏಕಾಗಿಯೂ ನೆನೆಯುವನು. ರೂಢಿಯನ್ನು ತುಸು ವಿಚಾರಿಸಿದರೆ ಈ ಅನನ್ಯ ಎಂಬ ಭಾವವು ನಿನಗೆ ಚನ್ನಾಗಿ ಮನವರಿಕೆಯಾಗುವದು. ಒಂದು ಕುಟುಂಬದೊಳಗೆ ಗಂಡ, ಹೆಂಡತಿ ಮತ್ತು ಒಬ್ಬ ಮಗಳೂ, ಒಬ್ಬ ಸೋದರಳಿಯ

ಈ ನಾಲ್ಕು ಜನರು ಇರುವರೆಂದು ಭಾವಿಸು. ಸೋದರ ಅಳಿಯನಿಗೆ ತನ್ನ ಮಗಳು ಸೋದರಸೊಸೆಯಲ್ಲವೇ ? ಇವರೆಲ್ಲರೂ ದಿನದ ವ್ಯವಹಾರದಲ್ಲಿ ಪರಸ್ಪರರು ಪ್ರೀತಿ ಪೂರ್ವಕವಾಗಿ ಹೆಸರುಗೊಂಡು ಕರೆಯುತ್ತ ವ್ಯವಹಾರ ಮಾಡುವರು. ಕೆಲವುಕಾಲದಮೇಲೆ ಮನೆಯ ಯಜಮಾನನು ಮಗಳನ್ನು ತನ್ನ ಸೋದರ ಅಳಿಯನಿಗೆ ಮದುವೆಯನ್ನಾಗಿ ಮಾಡಿಕೊಟ್ಟನು. ಆಗ್ಗೆ ಸೋದರ ಅಳಿಯನಿಗೆ ತನ್ನ ಮಗಳು ಸತಿಯಾದಳು ಆ ಮೇಲೆ ಅವರೀರ್ವರ ವ್ಯವಹಾರವು ಮೊದಲಿನಂತಿರದೆ ಬೇರೆಯಾಯಿತು. || ಸೋದರ ಸೊಸೆ ಮದುವೆಯ ಮೊದಲ್| ಮೋದದಿ ಕರೆಯುವಳು ದಿನದಿ ಮಾವನ ಪೆಸರಂ || ಆದರ ದಿಂದೊಂದಿರೆ ತಾವ್| ಸಾಧಿಸುತಿಹಳವಳು ಮನದಿ ಗೌಪ್ಯ ಸ್ಥಿತಿಯಂ || ಎಂಬಂತೆ ಮದುವೆಯ ಪೂರ್ವದಲ್ಲಿ ತನ್ನ ಮಾವನ ಹೆಸರನ್ನು ದಿನಾಲು ವ್ಯವಹಾರದಲ್ಲಿ ಸೊಸೆಯು ಹೇಗೆ ಕರೆಯುತ್ತಿದ್ದಳೋ ಹಾಗೆ ಮದುವೆಯಾದ ಮೇಲೆಅವಳು ಸತಿ ಎನಿಸಿದ್ದರಿಂದ ಪತಿಯ ನಾಮವನ್ನು ಅನ್ಯರಕಿವಿಗೆ ಬೀಳ್ಗೊಡದೆ ಮನಸ್ಸಿನಲ್ಲಿಯೇ ಗುಪ್ತವಾಗಿ ನೆನೆಯಲಾರಂಭಿಸಿದಳು. ಯಾಕಂದರೆ ಮದುವೆಯಾಗದ ಪೂರ್ವದಲ್ಲಿ ತಾನು ಬೇರೆ ತನ್ನ ಸೋದರಮಾವ ಬೇರೆ ವೆಂಬದಾಗಿ ಎರಡು ಭಾವನೆಯುಳ್ಳವಳಾಗಿದ್ದಳು. ಮದುವೆಯಾದ ಬಳಿಕ ಅದೇ ಸೊಸೆಯು ಸೋದರಮಾವನಿಗೆ ಸತಿಯಾದ್ದರಿಂದ ಅವಳು ಅವನನ್ನು ಸೋದರಮಾವನೆಂದು ತಿಳಿದುಕೊಳ್ಳದೆ ತನ್ನ ಪತಿಯೆಂದರಿತು ತಾನೂ ಅವನೂ ಒಂದೇ ಎಂಬ ಭಾವವುಳ್ಳವಳಾದಳು. ಈ ವ್ಯವಹಾರವನ್ನು ಸಂಸಾರದಲ್ಲಿ ನೀನು ಚನ್ನಾಗಿ ಮನಗಂಡಿರುವಿ. ಸೊಸೆಮತ್ತು ಮಾವಂದಿರ ಮದುವೆಯಾದ ಮೇಲಿನ ವ್ಯವಹಾರದಂತೆ ವಿಶ್ವಧರ್ಮಿಗಳ ಪೂಜಾ ಸಂಬಂಧವಿರುವರುವದು. ಲಗ್ನವಾದ ಮೇಲೆ ಹ್ಯಾಗೆ ಎದುರಿಟ್ಟು ನೋಡದೆ ದೇಹವೆರಡಿದ್ದರೂ ಇಬ್ಬರು ಒಂದೇ ಎಂದು ತಿಳಿದುಕೊಂಡು ಸತಿಯ ನಾಮವನ್ನು ಪತಿಯೂ ಪತಿಯ ನಾಮವನ್ನು ಸತಿಯೂ ಅತಿ ಗೌಪ್ಯವಾಗಿಟ್ಟುಕೊಂಡು ಹೇಗೆ ವ್ಯವಹರಿಸುವರೋ ಹಾಗೆ ವಿಶ್ವಧರ್ಮಿಗಳು ಜನ್ಮಾರಭ್ಯದಿಂದ ಜನ್ಮಾಂತರದವರೆಗೂ ಅಂಗಲಿಂಗ ಸಂಬಂಧವನ್ನು ಸತಿ, ಪತಿ ಭಾವದಂತೆ ಅರಿತು ಪತಿಯಾದ ಲಿಂಗದೇವನ ನಾಮವನ್ನು ಗೌಪ್ಯವಾಗಿ ಮಂತ್ರಸ್ವರೂಪವಾಗಿ ಜಪಿಸುವರೇ ಹೊರತು, ಲಗ್ನಗವಾದ ಪೂರ್ವದ ಸೊಸೆಯು ಮಾವನನ್ನು ಕೂಗುತ್ತ ಕರೆಯುವಂತೆ ಬೀದಿಬೀದಿಗಳಲ್ಲಿ ಚಪ್ಪಾಳೆ ಹೊಡೆದು ಒದರುತ್ತಿರು

ವದಿಲ್ಲ. ಮದುವೆಯಾಗದ ಪೂರ್ವದಲ್ಲಿ ಕೂಗುತ್ತ ಕರೆಯುವ ಸೊಸೆಯು ಮದುವೆಯಾದಬಳಿಕ ಕೂಗುತ್ತ ಹೆಸರುಗೊಂಡು ಕರೆಯುವದು ಅಧರ್ಮ ವೆಂತಲೂ ಒಂದು ವೇಳೆ ಹಾಗೆ ಕರೆದದ್ದಾದರೆ ಪತಿಯು ಅವಕೃಪೆಗೆ ಪಾತ್ರ ಳಾಗುವೆನೆಂಬೂ ಅರಿತು ಬಹುಭೀತಳಾಗುವಂತೆ, ವಿಶ್ವಧರ್ಮಿಗಳು, ಸೂರ್ಯ ಪಾನ ಕುಸುಮವು ಸೂರ್ಯನಿದ್ದೆಡೆಗೆ ಹೊರಳುವಂತೆ, ಬೇರೆಕಡೆಗೆ ದೃಷ್ಟಿ ಯನ್ನು ಚಲಿಸದೇ ಲಿಂಗದೇವನ ನಾಮವನ್ನು ಬಾಯಿಗೆ ಬಂದಂತೆ ಕೂಗದೇ ಏಕಭಾವದಿಂದ ನೆನೆಯುವರು. ಇದಕ್ಕೆ ಅನನ್ಯಭಾವವೆನ್ನುವರು.

**ಶಿಷ್ಯ:**— ಗುರುವೇ ಇಷ್ಟಲಿಂಗವನ್ನೇ ವಿಶ್ವಧರ್ಮಿಗಳು ನೆನೆಯಬೇ ಕೆಂದು ಅಪ್ಪಣೆ ಕೊಡಿಸಿದಿರಿ. ಆದರೆ ಈಗ ಎಲ್ಲಿ ನೋಡಿದರೂ ಮಠ, ಮಂದಿ ರಗಳಲ್ಲಿ ಬೇರೆಬೇರೆ ಮೂರ್ತಿಗಳ ಆರಾಧನೆಯನ್ನು ಮಾಡುತ್ತಿ ರುವರಲ್ಲಾ.

**ಗುರು:**— ಶಿಷ್ಯನೇ ಕೇಳು. ಬರಬರುತ್ತ ವಿಶ್ವಧರ್ಮಿಗಳಲ್ಲಿ ರೂಢಿಯ ವಶದಿಂದಲೋ ಅಥವಾ ಅಜ್ಞಾನದಿಂದಲೋ ಭಕ್ತಿಯ ಉದ್ರೇಕ ದಿಂದಲೋ ಇಲ್ಲವೆ ತಮ್ಮೊಳಗಿದ್ದ ಭಕ್ತಿವೈಶಿಷ್ಟ್ಯವು ಅನ್ಯರಿಗೆ ತಿಳಿಯಲೆಂಬ ದಾಗಿಯೋ ಅವುದೋ ಒಂದು ಉದ್ದೇಶದಿಂದ ಗುರುಗಳಾಗಲಿ, ಭಕ್ತರಾಗಲಿ ಮಠಗಳಲ್ಲಿಯೂ ಮನೆಗಳಲ್ಲಿಯೂ ತಮತಮಗೆ ಇಷ್ಟವೆನಿಸಿದ ಮೂರ್ತಿಗ ಳನ್ನು ಸ್ಥಾಪನೆಮಾಡಿ ಪೂಜಿಸುತ್ತಿರುವರೆನ್ನುವ ನಿನ್ನ ಮಾತು ನಿಜವು. ಆದರೆ ಹೀಗೆಮಾಡುವದು ವಿಶ್ವಧರ್ಮಿಗಳ ಮಾರ್ಗವಲ್ಲ. ಮಂದಿರಗಳನ್ನು ನಿರ್ಮಿಸಿ ಮೂರ್ತಿ ಪ್ರತಿಷ್ಠಾಪನೆಯನ್ನು ಮಾಡಿ ಆರಾಧಿಸುವದು ಮಂದಬುದ್ಧಿಗಳ ಮಾರ್ಗವೆಂಬದಾಗಿ ಮೇಲೆ ಉದಾಹರಿಸಿದ್ದಾಗಿದೆ. ಅವರಿಗೆ ದೈವೀಕಲ್ಪನೆಯ ಬಗ್ಗೆ ಸೂಕ್ಷ್ಮವಾದ ತಿಳುವಳಿಕೆ ಇಲ್ಲದ್ದರಿಂದ ಬಾಲಕನಿಗೆ ಶಾಲೆಯಲ್ಲಿ ಗುರುವು ಸ್ಥೂಲಮಾನದಿಂದ ದೃಷ್ಟಾಂತವನ್ನು ತೋರಿಸಿ ಯಾವದೊಂದು ವಿಷಯವನ್ನು ಅವನಲ್ಲಿ ಮನನಮಾಡಿ ಕೊಡುವಂತೆ ಸ್ಥೂಲಬುದ್ಧಿ ಮಾನ ವರಿಗೆ ದೈವೀಕಲ್ಪನೆಯನ್ನು ಹುಟ್ಟಿಸುವದಕ್ಕಾಗಿ ಅವರವರ ಆಕಾರದಂತಹ ಮೂರ್ತಿಗಳನ್ನು ಸ್ಥಾಪಿಸಿ ಅವುಗಳ ಆರಾಧನೆಯನ್ನು ಅವರಿಗೆ ಜ್ಞಾನಿಗಳು ಮಾಡಹಚ್ಚುವರು. ಹಾಗೆ ಮಾಡದಹೊರತು ಅವರಲ್ಲಿ ದೇವರ ಬಗ್ಗೆ ಭಕ್ತಿ

ಯುತ್ಪನ್ನವಾಗುವದಿಲ್ಲ. ಬಾಲಕನು ಮೂಲಾಕ್ಷರಗಳನ್ನು ತೀಡಿ ತೀಡಿ ಮುಂದೆ ಓದಲು ಕಲಿಯುವಂತೆ ಸ್ಥೂಲಮೂರ್ತಿಗಳಲ್ಲಿ ದೈವೀಭಕ್ತಿಯನ್ನಿಟ್ಟು ಸ್ಥಿರಗೊಳಿಸಿದಮೇಲೆ ಜ್ಞಾನಿಗಳು ಅವರಿಗೆ ದೈವತ್ವದ ನಿಜವಾದ ಕಲ್ಪನೆ ಮಾಡಿಕೊಡುವರು. ನಶ್ವರವಾವುದು ? ಶಾಶ್ವತವಾವುದು ? ಎಂಬ ನಿಜವಾದ ಸ್ಥಿತಿಗೆ ಬಂದಂಥ ವಿಶ್ವಧರ್ಮಿಗಳು ಪುನಃ ಸ್ಥೂಲಮಟ್ಟಕ್ಕಿಳಿದು ಮಂದ ಮನುಜರ ಮಾರ್ಗಾವಲಂಬಿಗಳಾಗುವದೆಂದರೆ ಅವರ ಪರಮಮೂರ್ಖತನವೇ ಸರಿ. ಕಾಲವೈಚಿತ್ರ್ಯದಿಂದ ಧರ್ಮವು ಪ್ರತಿಯೊಬ್ಬರಲ್ಲಿ ಮರೆಮಾಜುತ್ತಿರುವಾಗ್ಗೆ ಸುಜ್ಞಾನಿಗಳೆನಿಸಿಕೊಳ್ಳುವವರೂ, ತಪಸ್ವಿಗಳೆನಿಸಿಕೊಳ್ಳುವವರೂ, ಡಂಭಾಚಾರಕ್ಕಾಗಿಯೋ, ಭಕ್ತಿಬಾಹುಲ್ಯಕ್ಕಾಗಿಯೋ ತಮ್ಮತಮ್ಮಸ್ಥಳಗಳಲ್ಲಿ ಚಂದಚಂದವಾದ ಮೂರ್ತಿಗಳನ್ನೂ ಸ್ಥಾಪಿಸುತ್ತಿದ್ದಾರೆ. ಇದು ವಿಹಿತವಲ್ಲ. ಇವರು ಹೀಗೆ ಮೂರ್ತಿಗಳನ್ನು ಪ್ರತಿಷ್ಠಾಪಿಸುತ್ತ ನಡೆದರೆ ಶೈವರಿಗೂ ಇವರಿಗೂ ಭೇದವೇನು ? ಇವರಿಗೆ ವಿಶ್ವಧರ್ಮಿಗಳೆಂಬ ನಾಮವೇಕೆ ? ಆ ಸ್ಥಾಪಿಸಿದ ಮೂರ್ತಿಗಳನ್ನು ಅರ್ಚಿಸುವವರಾರು ?. ಅರ್ಚನಾದಿಗಳು ನಡೆಯದಿದ್ದರೆ ಅವುಗಳನ್ನು ಸ್ಥಾಪಿಸುವ ಕಾರಣವೇನು ? ಇಷ್ಟಲಿಂಗಧಾರಿಗಳಾದ ವಿಶ್ವಧರ್ಮಿಗಳು ಸ್ಥಾವರ ಮೂರ್ತಿಗಳನ್ನು ಪೂಜಿಸಲು ಬರುವದೋ ಹೇಗೆ ? ಅಥವಾ ಬೇರೆ ಧರ್ಮಿಗಳು ಅವುಗಳನ್ನು ಪೂಜಿಸುವಂತಿದ್ದರೆ ಮಠಮಾನ್ಯಗಳಲ್ಲಿ ಅವುಗಳನ್ನು ಸ್ಥಾಪಿಸುವ ಕಾರಣವೇನು ? ದೊಡ್ಡವರ ಮಾರ್ಗವನ್ನು ಅವಲಂಬಿಸುವದು ಸಣ್ಣವರ ಸ್ವಭಾವವಾದ್ದರಿಂದ ಇಂಥ ಶೈವಕರ್ಮಗಳನ್ನು ದೊಡ್ಡವರು ಮಾಡುತ್ತ ನಡೆದರೆ ಸಾವಿರಾರು ವಿಶ್ವಧರ್ಮಿಗಳು ಅವರ ಬೆನ್ನು ಹತ್ತಿ ಸಾಗುತ್ತಿರುವರಲ್ಲವೇ. ಈ ಸಾವಿರಾರು ಜನರ ಧರ್ಮಬಾಹ್ಯತನಕ್ಕೆ ಹೊಣೆಯರಾರು ? ನಶ್ವರವಾದ ಬ್ರಹ್ಮಸೃಷ್ಟಿಯಲ್ಲಿ ಸ್ಥಾಪಿಸುವ ಸ್ಥಾವರ ಮೂರ್ತಿಗಳನ್ನೆಲ್ಲ ತ್ಯಜಿಸಿ ಶಿವಸೃಷ್ಟಿಯಲ್ಲಿ ಕಾಲಿಟ್ಟು ಸಚ್ಚಿದಾನಂದ, ನಿರಾಕಾರ, ನಿರ್ವಿಕಲ್ಪರೂಪವಾದ ಇಷ್ಟಲಿಂಗವನ್ನು ಆರಾಧಿಸಲು ಗುರುವು ಕೃಪೆಯಿಂದ ಅನುವುಕೊಟ್ಟಿರುತ್ತಿರಲು "ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ............... ಎಂಬುವ ಮಹಾತ್ಮರ ವಚನಕ್ಕೆ ಎದುರ್ರು ನಡೆಯುವದು ವಿಶ್ವಧರ್ಮಿಗಳ ನಡತೆಯಲ್ಲ. ಸದಸದ್ವಿವೇಚನೆಯುಳ್ಳವ

ರಾಗಿ ನಾವು ಯಾರು ? ನಮ್ಮ ಧರ್ಮವು ಆವುದು ? ಎಂಬ ನಿಜ ತಿಳುವಳಿಕೆ ಯನ್ನು ಬಲಿಸಿ ಶೈವಕರ್ಮಗಳಿಂದ ದೂರಾಗಿ ನಡೆಯಲ್ಲಿ ಒಂದು ನುಡಿಯಲ್ಲಿ ಒಂದು ಎಂಬ ವಿರುದ್ಧ ನಡೆನುಡಿಯುಳ್ಳವರಾಗದೆ ವಿಶ್ವಧರ್ಮದ ನಿಜವಾದ ತಿಳುವಳಿಕೆಯನ್ನು ಹೊಂದಿ ವರ್ತಿಸುವದು ತಮ್ಮ ಮಾನವ ಧರ್ಮಕ್ಕೆ ಭೂಷಣವಾದದ್ದು. ಶಿಷ್ಯನೇ ಅನ್ಯಮೂರ್ತಿಗಳ ಸ್ಥಾಪನೆಯೂ ಆರಾಧನೆ ಯೂ ವಿಶ್ವಧರ್ಮಿಗಳ ಕರ್ತವ್ಯವಲ್ಲ.

**ಶಿಷ್ಯ:**— ಗುರುವರ್ಯನೇ ಮಜ್ಜಾ, ಮಾಂಸ, ಎಲಬು, ತೊಗಲು ಗಳಿಂದ ಕೂಡಿದ ಈ ದೇಹದೊಳಗೆ ಸ್ವತಂತ್ರಶಕ್ತಿಯ ( ದೇವಾಂಶದ ) ವಾಸವೆಂತು ?

**ಗುರು:**— ಶಿಷ್ಯನೇ ಕೇಳು. ನೀನು ಪ್ರವಾಸ ಮಾಡುವದಕ್ಕಾಗಿ ಬೇರೂರಿಗೆ ಹೋಗುವಾಗ್ಗೆ ಮೋಟಾರ ಗಾಡಿಯನ್ನು ಹತ್ತಿರುವಿಯಷ್ಟೇ ? ಸೂರ್ಯನು ಮುಣುಗಿ ಕತ್ತಲವಾಗಲು ಮೋಟಾರವನ್ನು ನಡೆಯಿಸತಕ್ಕವನು ಮಾರ್ಗ ಗೊತ್ತುಹಚ್ಚುವದಕ್ಕಾಗಿ ಬೆಳಕನ್ನು ಮಾಡುತ್ತಾನಲ್ಲವೇ. ಆ ಬೆಳಕು ಎಲ್ಲಿಯದೆಂಬುವದನ್ನು ನೀನು ಬಲ್ಲಿಯಾ. ಬೆಳಕು ಮೋಟಾರವನ್ನು ಬಿಟ್ಟು ಬೇರೆಕಡೆಯಿಂದ ಹುಟ್ಟಿರುವದೋ ಇಲ್ಲ. ಮೋಟಾರದಲ್ಲಿದ್ದ ಬ್ಯಾಟ್ರಿಯಿಂ ದಲೇ ಆ ಬೆಳಕು ಉತ್ಪನ್ನವಾಗಿರುವದು. ಬ್ಯಾಟ್ರಿಯೆಂದರೆ ತಗಡು, ಕಬ್ಬಿಣ, ಕಾಜುಮೊದಲಾದವುಗಳಿಂದ ಕೂಡಿದ್ದಿರುವದಲ್ಲವೇ ? ಈ ತಗಡು ಕಾಜು ಗಳಿಂದಾದ ಬ್ಯಾಟ್ರಿಯಲ್ಲಿ ಕತ್ತಲೆಯನ್ನು ಕಳೆಯುವ ತೇಜಸ್ಸು ನೆಲೆಸಿರು ವಂತೆ ಮಜ್ಜಾ, ಮಾಂಸ, ಎಲಬು, ತೊಗಲುಗಳಿಂದಾದ ದೇಹದೊಳಗೆ ಅಜ್ಞಾನ ಕತ್ತಲೆ ( ಪ್ರಪಂಚ ) ನಾಶಮಾಡತಕ್ಕ ಸ್ವತಂತ್ರಶಕ್ತಿಯು ವಾಸ ವಾಗಿರಲು ಅಚ್ಚರಿಯೇನು ?

**ಶಿಷ್ಯ:**— ಗುರುವೇ ಈ ಸ್ವತಂತ್ರಶಕ್ತಿಯು ದೇಹದೊಳಗಿರುತ್ತಿದ್ದರೆ ಗೋಚರಿಸದ ಕಾರಣವೇನು ?

**ಗುರು:**— ಶಿಷ್ಯನೇ ಮನಗೊಟ್ಟು ಆಲಿಸು. ಈ ವಿಷಯವನ್ನು ಮೇಲೆ ತಿಳಿಸಿದ್ದಾಗಿದೆ. ಆದರೂ ಕೇಳು. ದೀಪದ ಕಡ್ಡಿಯ ತುದಿಗೆ ಬೆಂಕಿ ಇರುವದಲ್ಲವೇ? ಅದು ಕಾಣುವದೋ ಇಲ್ಲ. ಹಾಗಾದರೆ ಇಲ್ಲವೆನ್ನಲು ಆಸ್ಪ

ದವುಂಟೋ? ಇಲ್ಲ. ಬೆಂಕಿ ಇರುವದೆನ್ನುವದು ಅಲ್ಲಿ ಬೆಂಕಿಯು ಇರವನ್ನು ಕಂಡವನಿಗೆ ಮಾತ್ರ ಗೊತ್ತುಂಟು. ಗೊತ್ತಿದ್ದರೂ ಆ ಬೆಂಕಿಯು ಪ್ರಕಟವಾಗುವದಾವಾಗ್ಗೆ? ಅದನ್ನು ಕೆರೆವ ಕ್ಷಣದಲ್ಲಿಯುಲ್ಲವೇ? ಆದರಂತೆ ಗುರುವು ಲಿಂಗದಲ್ಲಿ ದೇವಕಲೆಯನ್ನು ನೆಲೆಸಿರುವನಷ್ಟೇ ಅದು ಆಚಾರವಿಚಾರಗಳ ಪ್ರಬಲಘರ್ಷಣೆಯಿಂದ ಪ್ರಕಟಿಸಬೇಕಲ್ಲದೆ ಬೇರೆ ಮಾರ್ಗದಿಂದಲ್ಲವು. ಜೀವನು ತನ್ನನ್ನು ತಾನು ಅರಿತುಕೊಳ್ಳಬೇಕಾದರೆ ಅವನಿಗೆ ಸದಾಚರಣೆಯು ಮುಖ್ಯವು. ಅದರಿಂದಲೇ ಅವನು ಪ್ರಾಪಂಚಿಕ ವಿಷಯಗಳನ್ನು ಕಂಡು ಅವುಗಳ ಕಡೆಗೆ ಹರಿದು ಹೋಗುವ ಮನವನ್ನು ತನ್ನ ಆಧೀನಕ್ಕೆ ಇಟ್ಟುಕೊಳ್ಳಲು ಸಮರ್ಥನಾಗುತ್ತಾನೆ. ಈ ಸದಾಚರಣೆಯು ಜೀವನದಲ್ಲಿ ನೆಲೆಗೊಳ್ಳಬೇಕಾದರೆ ಇದಕ್ಕೆ ಒಂದು ಸಾಧನ ಅವಶ್ಯವಾಗಿಬೇಕು. ಒಂದು ಮಾರ್ಗವನ್ನು ಹಿಡಿದು ಹರಿಯುತ್ತಿರುವ ಪ್ರವಾಹವನ್ನು ಬೇರೊಂದು ಕಡೆಗೆ ಸಾಗಿಸಬೇಕಾದರೆ ಹೇಗೆ ಅದಕ್ಕೆ ಬೇರೆ ಮಾರ್ಗವನ್ನು ಕೊಡಬೇಕೋ ಅದರಂತೆ ವಿಷಯಗಳನ್ನು ಕಂಡು ಓಡುತ್ತಿರುವ ಮನಸ್ಸನ್ನು ಅವುಗಳಿಂದ ಬಿಡುಗಡೆ ಮಾಡಬೇಕಾದರೆ ಆ ವಿಷಯಗಳ ಮಾರ್ಗವನ್ನು ಬಿಡಿಸಿ ಬೇರೆ ಮಾರ್ಗದತ್ತ ಮನಸ್ಸನ್ನು ಚಲಿಸುವಂತೆ ಮಾಡಬೇಕು. ಬೇರೆ ಮಾರ್ಗವೆಂದರೆ ನಿರ್ವಿಷಯದದಾರಿಯೇ ಸರಿ. ಈ ನಿರ್ವಿಷಯದ ಹಾದಿಯನ್ನು ಮನಸ್ಸು ಹೊಂದಿಕೊಳ್ಳಲು ಇಷ್ಟಲಿಂಗವೇ ಸಾಧನವು. ಈ ಇಷ್ಟಲಿಂಗವೇ ನಿನ್ನ ನಿಜವಾದ ದೇವತೆಯು. ಇದನ್ನೇ ನೀನು ನಿಶ್ಚಲಭಕ್ತಿಯಿಂದ ಪೂಜಿಸು. ಅಂದರೆ ನಿಜವಾದ ಜ್ಞಾನವು ನಿನಗಾಗಿ ನೀನು ಸಂಸಾರದಿಂದತ್ತ ಬಿಡುಗಡೆ ಹೊಂದುವಿ. ಅರ್ಥಾತ್ ಮೋಕ್ಷವನ್ನು ಪಡೆಯುವಿ. ಅದಕ್ಕಾಗಿಯೇ ವಿಶ್ವಧರ್ಮಿಗಳು ಇಷ್ಟದೇವತಾರ್ಚನೆಯೆಂಬುವದನ್ನು ಧರ್ಮದ ಎಂಟನೆಯ ನೇಮವನ್ನಾಗಿ ಗೊತ್ತುಮಾಡಿದ್ದಾರೆ.

---



# — ಪಾದೋದಕವು. —

ಇರುಳೆಲ್ಲವೂ ಮಾನವದೇಹದೊಳಗೆ ಆಹಾರದ ಪಚನಕ್ರಿಯೆಗಳ ವ್ಯವಹಾರವು ಸರಿಯಾಗಿ ನಡೆದು ಶರೀರದ ತುಂಬೆಲ್ಲ ಉಷ್ಣತೆಯುತ್ಪನ್ನವಾಗುವದು. ಮನುಷ್ಯನು ಮಲಗಿ ಎದ್ದೊಡನೆಯೇ ತನ್ನ ದೇಹದಮೇಲೆ ಕೈಯ್ಯಿಟ್ಟುನೋಡಲು ಅದು ಶಕೆಯುಳ್ಳದ್ದೂ ಮಲಿನಯುಕ್ತವಾದದ್ದೂ ಕಂಡುಬರುವದು. ಅವನು ಮಲಿನವನ್ನು ಹೋಗಲಾಡಿಸುವದಕ್ಕೋಸ್ಕರ ನೀರಿನಿಂದ ದೇಹದ ಹೊರಭಾಗವನ್ನೆಲ್ಲ ಸ್ವಚ್ಛವಾಗಿ ತೊಳೆಯುತ್ತಾನೆ ಆಗ ದೇಹವು ನಿರ್ಮಲವಾಗುವದಲ್ಲದೆ ದೇಹದ ಹೊರಭಾಗವು ತಂಪಾಗುವದು. ಆದರೆ ದೇಹದ ಒಳಭಾಗವು ಮಾತ್ರ ಶಕೆಯುಳ್ಳದ್ದಾಗಿಯೇ ಇರುವದು. ಹೊರಭಾಗದಂತೆ ದೇಹದ ಒಳಭಾಗವನ್ನೂ ಸಹ ತಂಪುಮಾಡಿದ್ದಾದರೆ ಮನುಷ್ಯನ ಇಡೀ ದೇಹವೆಲ್ಲ ಸಮಸ್ಥಿತಿಯುಳ್ಳದ್ದಾಗಿಯೂ ನಿರೋಗಿಯಾಗಿಯೂ ಉಳಿಯುವದರಲ್ಲಿ ಏನೂ ಸಂದೇಹವಿಲ್ಲ. ಹೊರಭಾಗವನ್ನು ತೊಳೆಯಲು ಬರುವಂತೆ ದೇಹದ ಒಳಭಾಗವನ್ನು ಮಾತ್ರ ತೊಳೆಯಲು ಸಾಧ್ಯವಿಲ್ಲ. ಆದರೂ ಶರೀರದ ಒಳಹೊರಭಾಗಗಳನ್ನು ಒಂದೇ ಸ್ಥಿತಿಯಲ್ಲಿರಿಸುವದರಿಂದಲೇ ಮಾನವನ ಆರೋಗ್ಯವು ಸಾಧಿಸುವದು. ಅಂದಮೇಲೆ ಮಾನವನು ತನ್ನ ದೇಹದ ಒಳಭಾಗವನ್ನು ದಿನಾಲು ಶೀತಯುಕ್ತವನ್ನಾಗಿ ಮಾಡಲೇಬೇಕು. ದೇಹದ ಹೊರಭಾಗವನ್ನು ಹೇಗೆ ತಂಪು ಮಾಡುವನೋ ಅದರಂತೆ ಒಳಭಾಗವನ್ನೂ ಸಹ ತಂಪುಗೊಳಿಸಲು ಸಾಧನವೆಂದರೆ ಮನುಷ್ಯನು ಪ್ರತಿ ದಿನ ಎದ್ದ ಕೂಡಲೆ ಕೈಕಾಲು, ಮುಖ, ಬಾಯಿಗಳನ್ನು ಸ್ವಚ್ಛವಾಗಿ ತೊಳೆದುಕೊಂಡು ತುಸು ನೀರನ್ನು ಕುಡಿಯಬೇಕು. ಆ ನೀರು ಒಳಸೇರಿ ಉಷ್ಣವಾಗಿದ್ದ ಒಳದೇಹವನ್ನು ತಂಪುಗೊಳಿಸುವದು. ಇದಕ್ಕಾಗಿಯೆ ವೈದ್ಯಶಾಸ್ತ್ರವೂ ಕೂಡ ಉಷ:ಪಾನವನ್ನು ಪ್ರತಿಯೊಬ್ಬನು ಮಾಡಬೇಕೆಂದು ಸಾರಿ ಹೇಳುತ್ತದೆ. ಪ್ರತಿಯೊಂದು ಧರ್ಮದವರು ಆರೋಗ್ಯತೆಗಾಗಿಯೇ ಒಳದೇಹ ಶೀತಲಕ್ಕಾಗಿ ತೀರ್ಥಪಾನವೆಂಬ ರೂಢಿಯನ್ನಿಟ್ಟುಕೊಂಡಿದ್ದಾರೆ. ಇದನ್ನೇ ವಿಶ್ವಧ

ರ್ತ್ರಿಗಳು ಆರೋಗ್ಯವನ್ನು ಕಾಯ್ದುಕೊಳ್ಳಲು ಮಾನವನಿಗೆ ಧರ್ಮಸ್ವರೂಪ ವಲ್ಲಿ ಈ ಕೆಳಗಿನಂತೆ ವಿಧಿಯನ್ನಾಗಿ ಗೊತ್ತುಮಾಡಿದ್ದಾರೆ.

ಹಣ್ಣು ಎಲ್ಲರಿಗೂ ರುಚಿಕರವಾದ ಪದಾರ್ಥವು. ಅದರೊಳಗೆ ಮಾಧುರ್ಯ ರಸವು ದೊರೆಯುವದು. ಮಧುರ ರಸಪಾನದಿಂದ ಎಲ್ಲರೂ ಸುಖಪಡುವರು. ಅಂತೆಯೇ ಹಣ್ಣನ್ನು ಬಾಲಕ ಮೊದಲುಗೊಂಡು ಸರ್ವರೂ ಆಶಿಸುತ್ತಿರುವರು. ಹಣ್ಣು ಗಿಡದ ತುದಿಯಲ್ಲಿ ದೊರೆಯುವದು. ಅದರಂತೆ ದೇಹವೆಂಬುವದೊಂದು ಗಿಡವು. ಈ ಗಿಡದ ಮೂಲವು ಮಸ್ತಕವು. ಪಾದವು ಈ ಗಿಡದ ತುದಿಯು. ತುದಿಯಲ್ಲಿರುವ ಬೆರಳುಗಳೇ ಹಣ್ಣುಗಳು. ಹಣ್ಣಿನಲ್ಲಿ ಮಧುರರಸ ಹೊರಡುವಂತೆ ದೇಹವೃಕ್ಷಕ್ಕೆ ಹಣ್ಣು ಸ್ವರೂಪವಾದ ಬೆರಳಿನಿಂದ ನಿತ್ಯಸುಖವನ್ನೀಯುವ ರಸವು ಹೊರಡುವದು.ಅದೇ ಪಾದೋದಕವು. ಮಾನವನು ದಿನಾಲು ತಪ್ಪದೆ ಈ ಪಾದೋದಕವನ್ನು ಪಾನ ಮಾಡುವದರಿಂದ ಇಹದಲ್ಲಿ ಆರೋಗ್ಯಯುಕ್ತನಾಗಿ ಪರದಲ್ಲಿ ಮುಕ್ತಿಯನ್ನು ಹೊಂದುವನೆಂದು ಆಗಮಉಪನಿಷತ್ತು ಮೊದಲಾದ ಗ್ರಂಥಗಳಲ್ಲಿ ಉಲ್ಲೇಖವುಂಟು.

ಗಿಡವು ತನಗಾಧಾರವಾದ ಭೂಮಿಯೊಳಗಿನ ರಸವನ್ನು ಹೀರಿಕೊಂಡು ತುದಿಯಲ್ಲಿರುವ ಹಣ್ಣಿನಮೂಲಕ ಜನಗಳಿಗೆ ಸುಖವನ್ನೀಯುವಂತೆ ದೇಹ ವೃಕ್ಷವು ತನಗೆ ಮೂಲವಾದ ಮಸ್ತಕದ ಪಶ್ಚಿಮ ಚಕ್ರದೊಳಗಿದ್ದ ಪರಶಿವನಿಂದುಂಟಾಗುವ ಸತ್ಯ, ಆನಂದ ರಸವನ್ನು ಹಣ್ಣಿನರೂಪವಾದ ತುದಿಯಲ್ಲಿದ್ದ ಅಂಗುಷ್ಠ ಮೂಲಕ ಪಾದೋದಕವೆಂಬ ಹೆಸರಿನಿಂದ ಜನಗಳಿಗೆಲ್ಲ ಕೊಟ್ಟು ನಿತ್ಯಾನಂದವನ್ನುಂಟು ಮಾಡುವದು.

ಶಿಷ್ಯನು ತನ್ನ ಗುರುವನ್ನು ಕರೆತಂದು ಉನ್ನತಾಸನದಲ್ಲಿ ಕೂಡ್ರಿಸಿ ಆತನ ಲಿಂಗಪೂಜೆ ಪಾದಪೂಜೆಗಳನ್ನು ಮಾಡಿಕೊಳ್ಳುತ್ತಾನಷ್ಟೇ ? ಲಿಂಗ ಪೂಜೆಯನ್ನು ಮಾಡುವದರಿಂದ ಪಶ್ಚಿಮಚಕ್ರದೊಳಗಿದ್ದ ಪರಶಿವನ ಪ್ರಸನ್ನತೆಯಾಗುವದು. ಯಾಕೆಂದರೆ ಕರದೊಳಗಿರುವ ಇಷ್ಟಲಿಂಗದೊಳಗೆ ಪಶ್ಚಿಮ ಚಕ್ರದೊಳಗಿರುವ ಪರಶಿವನ ಕಳೆಯೇ ನೆಲಿಸಿರುವದು. ಈ ಸಂಗತಿಯನ್ನು ಹಿಂದಿನ ಪ್ರಕರಣದಲ್ಲಿ ಚನ್ನಾಗಿ ಹೇಳಿದ್ದಾಗಿದೆ. ಲಿಂಗ ಮತ್ತು ಪಶ್ಚಿಮಚಕ್ರಗಳಲ್ಲಿರುವ ಕಳೆಯು ಒಂದೇ ಆದ್ದರಿಂದ ತಾರಾಯಂತ್ರಗಳು ಬೇರೆ ಬೇರೆ

ಪಟ್ಟಣಗಳಲ್ಲಿದ್ದರೂ ಒಂದು ಸ್ಥಳದಲ್ಲಿಯ ಯಂತ್ರದಲ್ಲಿ ಶಬ್ದಮಾಡಲ್ಕ ಇನ್ನೊಂದು ಸ್ಥಳದೊಳಗಿರುವ ಯಂತ್ರದಲ್ಲಿಯೂ ಅದೇ ಶಬ್ದವೇ ಹುಟ್ಟು ವಂತೆ ಲಿಂಗಕಲೆಯು ಪೂಜೆಯಿಂದ ಪಶ್ಚಿಮ ಚಕ್ರಕಲೆಯು ವಿಕಸಿತವಾಗು ವದು. ಆ ಕಲೆಯು ವಿಕಸಿತವಾದೊಡನೆಯೇ ಅದರಲ್ಲಿರುವ ಆನಂದ ಅಥವಾ ಅಮೃತವು ಪಾದಾಂಗುಷ್ಟದ್ವಾರ ಶಿಷ್ಯನ ಭಾವನಾಬಲದಿಂದ ಹೊರಗೆ ಪ್ರಸ ನ್ನವಾಗುವದು. ಅಂದರೆ ಶಿಷ್ಯನು ಗುರುವಿನ ಪಾದಾಂಗುಷ್ಟದಮೇಲೆ ಶುದ್ಧ ಉದಕವನ್ನೆರೆದು ಪ್ರಸಾದ ಬಟ್ಟಲದೊಳಗೆ ಪಾದೋದಕ ರೂಪದಿಂದ ಅಮೃ ತವನ್ನು ಪಡೆದುಕೊಳ್ಳುವನು. ಪುನ: ಆ ಪಾದೋದಕವನ್ನು ಕರದೊಳ ಗಿರುವ ಇಷ್ಟಲಿಂಗದ ಕಲೆಯಮೇಲೆ ಎರೆದು ಪೂತವಾದ ಗುರುವಿನ ಪಾದೋ ದಕವನ್ನು ಪಾನ ಮಾಡುತ್ತಾನೆ.

ಮಾನವನು ಸ್ವಚ್ಛವಾದ ನೀರನ್ನು ತೆಗೆದುಕೊಂಡು ಪುನಃ ಅದಕ್ಕೆ ಪ್ರಣವ ಸಂಸ್ಕಾರದಿಂದ ಪವಿತ್ರತೆಯನ್ನುಂಟುಮಾಡಿ ದೇಹದ ಹೊರಭಾಗ ವನ್ನು ಸ್ನಾನದಿಂದ ಆರೋಗ್ಯಯುಕ್ತವನ್ನಾಗಿ ಮಾಡುವದಲ್ಲದೆ ಮೇಲೆ ಹೇಳಿದ ಧಾರ್ಮಿಕ ಸ್ವರೂಪದಿಂದ ಜಲವನ್ನು ಪವಿತ್ರಗೊಳಿಸಿ ದೇಹದ ಅಂತರ್ಭಾಗವನ್ನೂ ಸಹ ನಿರ್ಮಲಗೊಳಿಸುವದು ಅವನ ಕರ್ತವ್ಯವಾಗಿದೆ. ಹೀಗೆ ಮಾಡುವದರಿಂದ ಅವನು ಇಹದಲ್ಲಿ ಆರೋಗ್ಯತೆಯನ್ನೂ ಪರದಲ್ಲಿ ಮೋಕ್ಷವನ್ನೂ ಹೊಂದುವನೆಂಬ ಹೇತುವಿನಿಂದಲೇ ವಿಶ್ವಧರ್ಮಿಗಳು ಈ ಪಾದೋದಕರೂಪ ಸದಾಚರಣೆಯನ್ನು ಧರ್ಮದ ಒಂಭತ್ತನೇ ನೇಮ ವನ್ನಾಗಿ ಗೊತ್ತುಮಾಡಿದ್ದಾರೆ.

# — ಪ್ರಸಾದವು. —

—:o:—

ಮಾನವನು ತನ್ನ ಸಂಸಾರ ಸಾಮುಗ್ರಿಗಳನ್ನು ಸಂಗ್ರಹಿಸುವದಕ್ಕಾಗಿ ನೆರೆಯೂರಿಗೆ ಸಂತೆಗೆ ಹೋಗುತ್ತಾನಲ್ಲವೇ ? ಪುನಃ ಅವನು ತನ್ನ ಇಚ್ಛಿತ ಸಾಮಾನುಗಳನ್ನು ತೆಗೆದುಕೊಂಡು ತಿರುಗಿ ತನ್ನ ಮನೆಗೆ ಬಂದರೆ ಅ ವನ ಕೆಲಸವು ಪೂರ್ಣವಾದಂತಾಯಿತು. ಅರ್ಥಾತ್ ತಾನು ಎಲ್ಲಿಂದ ಬಂದಿರು ವನೋ ಅಲ್ಲಿಗೆ ಮರಳಿಹೋಗಿ ಮುಟ್ಟುವದು ಅವನ ಕೆಲಸವಾಗಿದೆ. ಅದ ರಂತೆ ಅಜ್ಞಾನದಿಂದ ಆವರಿಸಲ್ಪಟ್ಟ ಪರಮಾತ್ಮನು ಜೀವಾತ್ಮನಾಗಿ ಜಗ ತ್ತೆಂಬ ಸಂತೆಗೆ ಬಂದಮೇಲೆ ಅವನು ತನ್ನ ಮೂಲಸ್ಥಾನವನ್ನು ಅರಿತು ಅಲ್ಲಿಗೆ ಮುಟ್ಟುವದು ಅವನ ಆದ್ಯಕರ್ತವ್ಯವಾಗಿದೆ. ಅಂದಮೇಲೆ ದೇಹಧಾರಿ ಯಾದ ಜೀವಾತ್ಮನು ತನ್ನ ಪೂರ್ವದ ಸ್ವರೂಪಿಗನಾಗಬೇಕಾದರೆ ಅನೇಕ ಕಾಲದವರೆಗೂ ಪರಮಾತ್ಮನ ಚಿಂತೆಯೊಳಗೆ ಮಗ್ನನಾಗಬೇಕಾಗುವದು. ಜೀವಾತ್ಮನಿಗೆ ಪರಮಾತ್ಮನ ಸ್ವರೂಪಜ್ಞಾನವಾಗಬೇಕಾದರೆ ಅನೇಕ ಕಾಲ ಗತಿಸಬೇಕು. ಅಷ್ಟುಕಾಲಗಳವರೆಗೂ ಜೀವಾತ್ಮನು ಈ ದೇಹದ ಸಂಬಂಧ ವನ್ನಿಟ್ಟುಕೊಳ್ಳಬೇಕು. ಜೀವಾತ್ಮನು ದೇಹಸಂಬಂಧವನ್ನು, ನೌಕರಿಯ ಮ ನುಷ್ಯನು ಬಾಡಿಗೆಯ ಮನೆಯ ಸಂಬಂಧವನ್ನಿಟ್ಟುಕೊಂಡಂತೆ ಇಟ್ಟುಕೊಳ್ಳ ಬೇಕು. ನೌಕರಿಯ ಮನುಷ್ಯನು ತನ್ನ ನೌಕರಿಯ ಕೆಲಸವನ್ನು ಪೂರ್ಣಗೊ ಳಿಸುವದಕ್ಕಾಗಿ ಬೇರೊಂದು ಊರಿಗೆ ಹೋಗುತ್ತಾನೆ. ನೌಕರಿಯ ಅವ ಧಿಯು ಮುಗಿಯುವವರೆಗೂ ವಾಸಿಸಲು ಅಲ್ಲಿ ತಾನು ಒಂದು ಮನೆಯನ್ನು ಬಾಡಿಗೆಯ ರೂಪದಿಂದ ಗೊತ್ತುಮಾಡಿ ಅದರಲ್ಲಿ ವಾಸಿಸುವನು. ಮನೆಯು ತನ್ನದಲ್ಲ. ಅನ್ಯರದು. ಆದರೂ ತಾನು ವಾಸಿಸುವವರೆಗೂ ಅದರ ಯೋಗಕ್ಷೇಮದ ಕಡೆಗೆ ಲಕ್ಷ್ಯವಿಡುವನು. ಅಂದರೆ ಮಳೆ, ಚಳಿ, ಬೇಸಿ ಗೆಯ ಕಾಲಗಳಲ್ಲಿ ತನಗೆ ಇರಲು ಯಾವತರಹದಿಂದಲೂ ತೊಂದರೆ ಬರ ದಂತೆ ಎಚ್ಚರಪಡುವನೇ ಹೊರತು ಅದನ್ನು ಭದ್ರವಾಗಿ ಕಟ್ಟಿಸುವದರಲ್ಲಿಯೂ ಬಣ್ಣಹಚ್ಚಿ ಅಂದ ಮಾಡುವದರಲ್ಲಿಯೂ ಅವನ ವಿಚಾರವಿರುವದಿಲ್ಲ. ಯಾಕೆಂದರೆ ತನ್ನ ಕೆಲಸದ ಸಲುವಾಗಿ ಆ ಮನೆಯೇ ಹೊರತು ಆ ಮನೆಯ

ಸಲುವಾಗಿ ತಾನಿರುವದಿಲ್ಲವೆಂಬುವ ವಿಚಾರವನ್ನು ಅವನು ಚನ್ನಾಗಿ ತಿಳಿದಿರುವನು ಅದರಂತೆ ಜೀವಾತ್ಮನು ತನ್ನ ಪೂರ್ವದ ಸ್ವರೂಪವನ್ನು ಪಡೆಯುವದು ಮುಖ್ಯ ಕೆಲಸವಾಗಿದೆ. ಅದಕ್ಕಾಗಿ ಈ ದೇಹದ ಅವಶ್ಯಕತೆಯು ಜೀವಾತ್ಮನಿಗುಂಟು. ಅಲ್ಲಿಯವರೆಗೂ ಜೀವನು ದೇಹದಪೋಷಣೆಯನ್ನು ಮಾಡಲೇಬೇಕು. ಕಾಲಕಾಲಕ್ಕೆ ಅದಕ್ಕೆ ಬೇಕಾಗುವ ಅನ್ನ, ನೀರು, ಅರಿವೆಗಳಿಂದ ಅದನ್ನು ಕಾಪಾಡಿಕೊಳ್ಳಬೇಕು. ಅದನ್ನು ಬಿಟ್ಟು ಅದರ ಯೋಗಕ್ಷೇಮವೇ ತನ್ನ ಕರ್ತವ್ಯವೆಂದು ತಿಳಿದು ದೇಹವನ್ನು ಅಹೋರಾತ್ರಿ ಪುಷ್ಟಗೊಳಿಸುವದರಲ್ಲಿಯೂ ಅನೇಕ ತರಹದ ಅರಿವೆಗಳಿಂದಲೂ ಸುಗಂಧ ದ್ರವ್ಯಗಳಿಂದಲೂ ಅದನ್ನು ಚಂದಗೊಳಿಸುವಲ್ಲಿಯೂ ಕಾಲಯಾತನೆ ಮಾಡಿದರೆ ಜೀವಾತ್ಮನು ತನ್ನ ಕರ್ತವ್ಯಕರ್ಮದಿಂದ ಚ್ಯುತನಾದಂತಾಗುವನು. ಯಾಕಂದರೆ ತನಗಾಗಿ ಈ ದೇಹವಿರುವದಲ್ಲದೇ ಈ ದೇಹಕ್ಕಾಗಿ ತಾನಿರುವದಿಲ್ಲ. ಚಾಕರಿಯ ಮಾಡುವವನು ತನ್ನ ಚಾಕರಿಯನ್ನು ಬಿಟ್ಟು ತಾನು ವಾಸಿಸುವ ಬಾಡಿಗೆಯ ಮನೆಯ ರಕ್ಷಣೆಗಾಗಿ ಕಾಲವನ್ನು ಕಳೆದರೆ ಅವನಿಗೆ ದೊರೆಯತಕ್ಕ ವೇತನವು ಸಿಗದೆ ಅವನು ಪ್ರಪಂಚದೇಚಾಟದಲ್ಲಿ ಬೀಳುವಂತೆ ಜೀವಾತ್ಮನು ತನ್ನ ಕರ್ತವ್ಯಕರ್ಮವನ್ನು ಮರೆತು ಅಹೋರಾತ್ರಿ ಸಂಸಾರಚಕ್ರದೊಳಗೆ ಶಿಲುಕಿ ತೊಳಲಿ, ಬಳಲಬೇಕಾಗುವದು. ಆದಕಾರಣ ಜೀವಾತ್ಮನು ದೇಹಪೋಷಣೆಯೇ ತನ್ನ ಕೆಲಸವೆಂದು ತಿಳಿದು ಕಾಲಕಳೆಯದೆ ತನ್ನ ಮಹತ್ತರವಾದ ಕೆಲಸಕ್ಕೆ ದೇಹಪೋಷಣೆಯು ಸಹಾಯಕಾರಿಯಾಗಿರುವದೆಂದು ಅರಿತು ಅದಕ್ಕೆ ವೇಳೆವೇಳೆಗೆ ಅನ್ನ, ನೀರು, ಹವೆಯಾದಿಗಳನ್ನು ದೊರಕಿಸಿ ತನಗನುಕೂಲಸ್ಥಿತಿಯಲ್ಲಿಟ್ಟುಕೊಳ್ಳುವದು ಅವನ ಕರ್ತವ್ಯಕರ್ಮವಾಗಿದೆ.

ಜೀವನು ದೇಹಕ್ಕೆ ಆಹಾರವನ್ನು ಅವಶ್ಯವಾಗಿ ಹಾಕಬೇಕು. ಯಾಕಂದರೆ ಅದು ಪ್ರಾಣರಕ್ಷಕವಾಗಿರುವದು. ಆಹಾರವು ಪ್ರಾಣರಕ್ಷಕವಾಗಿರುವದೇನೋ ನಿಜ. ಆದರೆ ಅದರ ಯಥಾರ್ಥರೂಪವನ್ನರಿತು ಸೇವಿಸಲ್ಪಡುವುದಾದರೆ ಮಾತ್ರ ಅದು ತನ್ನ ಹೆಸರಿಗೆ ತಕ್ಕಫಲವನ್ನು ಕೊಡುವದು. ಇಲ್ಲವಾದರೆ ರಕ್ಷಕ ಗುಣವನ್ನುಬಿಟ್ಟು ಬಕ್ಷಕಗುಣವನ್ನವಲಂಬಿಸಿ ಪ್ರಾಣಘಾತಕವಾಗುವದು. ಆಹಾರವು ಲೋಕದಲ್ಲಿ ಸರ್ವಾರ್ಥ ಸಾಧಕವಾಗಿರುವದರಿಂದ ಅದರ

ವಿವೇಚನೆಯು ಸಾಮಾನ್ಯವಾದ ವಿಷಯವಲ್ಲ. ಅತಿಗಂಭೀರವಾಗಿರುವದು. ಹಸಿದಾಗ ಆಹಾರವನ್ನು ಸೇವಿಸಬೇಕೆಂಬುವದು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತುಂಟು. ಹೊಟ್ಟೆಯು ಬರಿದಾದಕೂಡಲೆ ಆಹಾರದಿಂದ ಅದನ್ನು ತುಂಬಿಸಬೇಕೆಂಬುವದು ಏನೂ ಅರಿಯದ ಪಾಮರನಿಗೂ ಕೂಡ ತಿಳಿದ ಸಂಗತಿಯಾಗಿದೆ. ಹಸಿವೆಯಾದ ಕೂಡಲೆ ಆಹಾರದಲ್ಲಿ ಪ್ರವೃತ್ತಿಯುಂಟಾಗುವದೂ ಸಹ ಸ್ವಾಭಾವಿಕವಾಗಿದೆ. ಪ್ರವೃತ್ತಿಯುಂಟಾದಕೂಡಲೆ ಹೊಟ್ಟೆಯೊಳಗೆ ಆಹಾರವನ್ನು ತುಂಬುವದೂ ಸ್ವಾಭಾವಿಕವೇ ಸರಿ. ಈ ಸ್ವಭಾವಸಿದ್ಧವಾದ ಎರಡು ವಿಷಯಗಳನ್ನರಿಯದೇ ಆಹಾರವನ್ನು ಸೇವಿಸುವದಾದರೆ ಅದರ ಯಥಾರ್ಥಫಲವು ದೊರೆಯಲಾರದು. ಮನುಷ್ಯನು ಎಲ್ಲಿಯವರೆಗೂ ಆಹಾರದ ನಿಜ ಸ್ವರೂಪವನ್ನೂ ಅದರ ಕಾರ್ಯಕಲಾಪವನ್ನೂ ಅರಿಯುವದಿಲ್ಲವೋ ಅಲ್ಲಿಯವರೆಗೂ ಆಹಾರದ ಯಥಾರ್ಥಫಲದಿಂದ ಅವನು ವಂಚಿತನಾಗಿಯೇ ಇರುತ್ತಾನೆ. ಈಗಿನ ಕೆಲವು ಜನರು ಆಹಾರ ಸಿದ್ಧಾಂತದ ಮರ್ಮವನ್ನರಿಯದೆ ಅನಿಯಮಿತತನದಿಂದ ಸ್ವೇಚ್ಛಾಹಾರಿಗಳಾಗಿ ಮನಬಂದಂತೆ ಆಚರಿಸುತ್ತಿರುವದರಿಂದಲೇ ಅಸಂಖ್ಯ ಜನರು ವೇಷಭೂಷಣಗಳಿಂದ ಮಾನವರೆನಿಸಿಕೊಂಡು ಅನಂತಕಾಲ ರೋಗಗಳನ್ನನುಭವಿಸುತ್ತಿರುವರು. ಹೀಗೆ ಮಾಡುವದೆಂದರೆ ಆಯುರ್ವೇದ ನೇಮಗಳನ್ನು ಉಲ್ಲಂಘಿಸಿದ ಮಹಾಪರಾಧವೇ ಅವರ ಪ್ರಾಯಶ್ಚಿತ್ತಕ್ಕೆ ಕಾರಣವೆಂದು ಹೇಳಬಹುದು. ಆದ್ದರಿಂದ ಪ್ರತಿಯೊಬ್ಬನು ಆಯುರ್ವೇದದಂತೆ ನಿಯಮಿತ ಆಹಾರವನ್ನು ಸೇವಿಸುವದು ಒಳಿತವಾದದ್ದು.

ವೈದ್ಯಶಾಸ್ತ್ರವು ಆರೋಗ್ಯವಂತನಾದ ಮನುಷ್ಯನಿಗೆ ದಿನಕ್ಕೆ ಎರಡು ಸಾರೆ ಊಟಮಾಡುವದನ್ನು ಗೊತ್ತುಮಾಡಿರುವದು. ಮೊದಲನೆಯ ಊಟವು ಪ್ರಾತಃಕಾಲದ ೧೦ ಘಂಟೆಯಿಂದ ಹನ್ನೆರಡು ಗಂಟೆಯೊಳಗೆ. ಎರಡನೆಯ ಊಟವು ರಾತ್ರಿ ಎಂಟು ಗಂಟೆಯೊಳಗೆ ಆಗತಕ್ಕದ್ದು. ದೇಹ ಮತ್ತು ಮನಸ್ಸಿನ ಶ್ರಮವನ್ನು ಹೆಚ್ಚಾಗಿ ಮಾಡತಕ್ಕವರು ಪ್ರಾತಃಕಾಲದಲ್ಲಿ ಹಸಿವೆಯಾದರೆ ಹಗುರಾದ ಆಹಾರವನ್ನು ಏಳು ಘಂಟೆಗೆ ಸೇವಿಸಬಹುದು. ರಾತ್ರಿಯೊಳಗೆ ನಮಯವನ್ನು ಮೀರಿ ಉಣ್ಣಬಾರದು. ಮತ್ತು ಗಟ್ಟಿಯಾದ ಇಲ್ಲವೆ

ಕರಿದ ಪದಾರ್ಥಗಳನ್ನು ಸೇವಿಸಬಾರದು. ರಾತ್ರಿಯಲ್ಲಿ ಆಹಾರವು ಯಾವಾಗಲೂ ಹಗುರಾಗಿರಬೇಕು. ಯಾಕಂದರೆ ರಾತ್ರಿಯು ವಿಶ್ರಾಂತಿ ಕಾಲವಾಗಿರುವದು. ಆ ಕಾಲದಲ್ಲಿ ಹಗಲೆಲ್ಲ ದುಡಿದು ದಣದಿರುವ ಸಕಲೇಂದ್ರಿಯಗಳಿಗೂ ವಿಶ್ರಾಂತಿಯು ಅವಶ್ಯವಾಗಿ ಬೇಕಾಗುವದು. ಇದನ್ನರಿಯದೆ ಯಾವ ಮನುಷ್ಯನು ನಾಲಿಗೆಯ ಚಟಾಧೀನನಾಗಿ ತಡೆಯಲಾರದೆ ಮೇಲಿಂದಮೇಲೆ ಆಹಾರ ಸೇವಿಸುವನೋ ಆತನ ಶರೀರದೊಳಗೆ ಆಹಾರದ ಪಚನಕ್ರಿಯೆಗಳು, ಸರಿಯಾಗಿ ಸಾಗಲಾರದೆ ಅಜೀರ್ಣ, ತಲೆನೋವು, ವಾಂತಿ, ಭೇದಿ ಮುಂತಾದ ರೋಗಗಳು ತಲೆದೋರುವವು. ಕಾರಣ ಹಾಗೆ ಮಾಡದೆ ಮೇಲೆ ಹೇಳಿದಂತೆ ಆಯುರ್ವೇದಾನುಸಾರವಾಗಿ ಆಹಾರ ತೆಗೆದುಕೊಳ್ಳುವದು ಅತ್ಯಂತ ಹಿತಕರವಾದದ್ದು.

ಮನುಷ್ಯನು ದೇಹಕ್ಕೆ ಆಹಾರವನ್ನು ಹಾಕಬೇಕಾದರೆ ಧಾರ್ಮಿಕರು ಒಂದು ಸಮೀಚಯನವಾದ ಮಾರ್ಗವನ್ನು ಈ ಕೆಳಗಿನಂತೆ ತೋರಿಸಿ ಕೊಟ್ಟಿದ್ದಾರೆ.

ತಾಯಿ ತಂದೆಗಳ ರುಧಿರ ರೇತಸ್ಸುಗಳಿಂದ ಪುತ್ರನ ಉತ್ಪತ್ತಿಯಷ್ಟೇ? ಮಗನು ಎಲ್ಲಿಯವರೆಗೂ ಅಸ್ವತಂತ್ರನೂ ಅಜ್ಞಾನನೂ ಆಗಿರುವನೋ ಅಲ್ಲಿಯವರೆಗೂ ಅವನ ಯೋಗಕ್ಷೇಮವನ್ನು ಕಾಣುವದು ತಾಯಿ ತಂದೆಗಳ ಕರ್ತವ್ಯವಾಗಿದೆ. ಅಂದರೆ ಮಗುವಿಗೆ ಕಾಲಕಾಲಕ್ಕೆ ಬೇಕಾಗುವ ಅನ್ನ ನೀರಾದಿಗಳಿಂದ ಪೋಷಣೆ ಮಾಡುವ ಭಾರವು ಜನನಿ ಜನಕರಮೇಲೆಯೇ ಉಂಟು ದುಡಿಯುವದು ತಂದೆ ತಾಯಿಗಳ ಕೆಲಸವು. ಸುಖಪಡುವದು ಮಗುವಿನ ಕೆಲಸವು ಮಗುವಿನ ತಂದೆಯು ದಿನಾಲು ಬೇರೊಬ್ಬನ ಕೈಯಲ್ಲಿ ಸಂಜೆಯವರೆಗೂ ದುಡಿದುಬರುತ್ತಾನೆ. ಬಂದ ಕೂಲಿಯಿಂದ ಪ್ರಪಂಚದ ಜನರೆಲ್ಲರೂ ಪೋಷಿತರಾಗುತ್ತಾರೆ. ಒಂದು ದಿವಸ ತಂದೆಯು ಊಟಕ್ಕೆ ಕೂತಿದ್ದಾನೆ. ತಾಯಿಯು ಉಣಬಡಿಸುತ್ತಿದ್ದಾಳೆ. ಊಟಮಾಡುವ ಸಮಯದಲ್ಲಿ ಮಗುವು ಹೊರಗಿನಿಂದ ಬಂದು ತಂದೆಯ ತೊಡೆಯಮೇಲೆ ಕೂತುಕೊಂಡು ತಂದೆಯ ಊಟದ ತಾಟಿನೊಳಗಿಂದ ಒಂದು ತುತ್ತು ಅನ್ನವನ್ನು ಮಗುವು ಕೈಯಲ್ಲಿ ತೆಗೆದುಕೊಂಡು ತಂದೆಯ ಬಾಯಿಯೊಳಗೆ ಹಾಕಿತು. ಆಗ್ಗೆ ತಂದೆಗೆ ಹಿಡಿಸಲಾರದಷ್ಟು ಸಂತೋಷವಾಯಿತಂತೆ. ಯಾಕೆ ? ತಂದೆಗೆ ಅಷ್ಟು

ಸಂತಸವಾಗಲು ಕಾರಣವೇನು ? ಉಣಬಡಿಸಲಿಟ್ಟ ಅನ್ನವು ತಂದೆಯ ಶ್ರಮದ್ದೋ ? ಅಥವಾ ಮಗುವಿನ ಶ್ರಮದ್ದೋ ? ಮಗುವಿನ ಶ್ರಮವು ತಿಲ ಮಾತ್ರವೂ ಅದರಲ್ಲಿರುವದಿಲ್ಲವೆಂಬುವದು ನಿರ್ವಿವಾದವಾದಮಾತು. ಅದೆಲ್ಲವೂ ತಂದೆಯ ಪರಿಶ್ರಮದ್ದೇ ಸರಿ. ಹೀಗಿದ್ದರೂ ತಂದೆಯು ತಾನು ಶ್ರಮಬಟ್ಟು ಗಳಿಸಿದ ಆಹಾರವನ್ನು ಸ್ವತಃ ತನ್ನ ಬಾಯೊಳಗೆ ತಾನು ಹಾಕಿಕೊಳ್ಳು ವಾಗ್ಗೆ ಆನಂದವಾಗದೆ ಅದೇ ಆಹಾರವನ್ನು ಏನೂ ಶ್ರಮವಿಲ್ಲದ ತನ್ನ ಮಗುವು ತನ್ನ ಬಾಯೊಳಗೆ ಹಾಕಿದ್ದಾದರೆ ತಂದೆಯು ಆನಂದಿತನಾಗಿ ಮಗುವನ್ನು ಮುದ್ದಾಡುತ್ತಾನೆ. ಇದರ ಮರ್ಮವೇನು ? ಇಷ್ಟೇ ಸರಿ. ನನ್ನ ಮಗುವು ನಾನು ಶ್ರಮಬಟ್ಟು ಸಂಗ್ರಹಿಸಿದ ಆಹಾರವು ತನ್ನದಲ್ಲವೆಂದರಿತು, ನನ್ನದೆಂದು ಭಾವಿಸಿ ತಾನು ಮೊದಲು ತನ್ನ ಬಾಯೊಳಗೆ ಹಾಕಿಕೊಳ್ಳದೆ ನನ್ನ ಬಾಯೊಳಗೆ ಹಾಕಿತಲ್ಲಾ! ಮಗುವು ನನ್ನಮೇಲೆ ಎಷ್ಟು ಕಾಳಜಿಯು ಳ್ಳದ್ದಾಗಿದೆ. ಎಂದು ತಿಳುವಳಿಕೆಯುಳ್ಳವನಾಗಿ ಮಗುವಿನ ಮೇಲೆ ಕೃಪೆ ಯನ್ನು ಮಾಡಿ ಮುದ್ದಾಡಿದನಲ್ಲವೇ ? ಅದರಂತೆ ಈ ಕಣ್ಣಿಗೆ ಕಾಣುವ ಜಗತ್ತು ನೆಲ, ನೀರು, ಕಿಚ್ಚು, ಗಾಳಿ, ಗಗನಗಳೆಂಬ ಐದು ತತ್ವಗಳ ಗುಂಪು. ಇವೆಲ್ಲವೂ ಪರಮಾತ್ಮನಿಂದ ಹುಟ್ಟಿರುವವು.

ಈ ಪಂಚ ತತ್ವಗಳಿಂದಲೇ ಕಣ್ಣಿಗೆ ಕಾಣಿಸತಕ್ಕ ಅನೇಕ ರಸ, ರುಚಿ ಪದಾರ್ಥಗಳ ಉತ್ಪತ್ತಿಯು. ಇವೆಲ್ಲವುಗಳೂ ಜೀವಾತ್ಮನ ಭೋಗ ಪದಾರ್ಥ ಗಳು. ಈ ಸಕಲ ಭೋಗ್ಯವಸ್ತುಗಳನ್ನು ಜೀವಾತ್ಮನು ಯಾವಾಗಲೂ ಆಹಾ ರ ಪದಾರ್ಥಗಳನ್ನಾಗಿ ಮಾಡಿಕೊಂಡು ತನ್ನ ಕ್ಷಣಿಕ ಸುಖವನ್ನು ಹೊಂದು ತ್ತಾನೆ. ಪ್ರಪಂಚದಲ್ಲಿ ಸಹಜವಾಗಿ ದೊರೆಯುತ್ತಿದ್ದ ಸಕಲ ಜಿನಸುಗಳಿಂದ ಕ್ಷಣಿಕ ಸುಖವನ್ನು ಅನುಭವಿಸುತ್ತ ಮಹತ್ತರವಾದ ಜ್ಞಾನದಿಂದ ಮಂಕ ನಾಗಿ ವಿಶ್ವದಲ್ಲಿ ಜೀವನು ವಿಲಾಸಮಯನಾಗಿದ್ದಾನೆ. ತನ್ನ ಸ್ವತಂತ್ರ ಶಕ್ತಿ ಯಕಡೆಗೆ ಈತನ ವಿಚಾರ ದೃಷ್ಟಿಯು ದೂರಾಗಿರುವದು. ಅಂತೆಯೇ ಇವನು ಸ್ವತಂತ್ರ ಶಕ್ತಿಯ ಸಂಬಂಧಿಕನಾದರೂ ಪರತಂತ್ರನಾಗಿ ತೊಳಲು ತ್ತಿದ್ದಾನೆ. ಇದನ್ನರಿತು ವಿಶ್ವಧರ್ಮಿಗಳು ಜೀವಾತ್ಮನು ಜಗತ್ತಿನೊಳಗೆ ಯಾವಪದಾರ್ಥವನ್ನು ಗ್ರಹಿಸಿದರೂ ತನ್ನ ಸ್ವತಂತ್ರಶಕ್ತಿಯ ನೆನಪಿ ನಿಂದಲೇತೆಗೆದುಕೊಳ್ಳಬೇಕೆಂಬ ಹೇತುವಿನಿಂದ ಧರ್ಮನೇಮವನ್ನು

ಹಾಕಿಕೊಟ್ಟಿದ್ದಾರೆ. ಈ ಧರ್ಮದ ನೇಮವು ಆರೋಗ್ಯಕ್ಕೆ ಅತಿ ಸಂಬಂಧಿಸಿರುವದೆಂಬುವದು ತುಸು ವಿಚಾರಿಸಿದರೆ ತಿಳಿಯುವದು. ಹೇಗಂದರೆ ಪ್ರತಿಯೊಂದು ಹೂವಿನಲ್ಲಿಯಾಗಲಿ ಹಣ್ಣಿನೊಳಗಾಗಲಿ ಅವುಗಳ ಸುಗಂಧ ವಾಸನೆಯಿಂದಲೂ ಕೆಂಪು, ರಸ, ರುಚಿಯಿಂದಲೂ ಕ್ರಿಮಿಗಳು ವಾಸವಾಗಿರುವದು ಸ್ವಾಭಾವಿಕವು ಅವುಗಳನ್ನು ಮನುಷ್ಯನು ಗಿಡಬಳ್ಳಿಗಳಿಂದ ಹರಿದು ತೆಗೆದುಕೊಂಡ ಕೂಡಲೆ ಮೂಸಿ ನೋಡುವದನ್ನಾಗಲಿ ತಿನ್ನುವದನ್ನಾಗಲಿ ಮಾಡಬಾರದು. ಯಾಕಂದರೆ ಅದರೊಳಗಿರುವ ಕ್ರಿಮಿಗಳು ಆ ಕೂಡಲೆ ಅವನ ಮೂಗಿನೊಳಗಿಂದಾಗಲಿ ಬಾಯಿಯೊಳಗಿಂದಾಗಲಿ ದೇಹದೊಳಗೆ ಪ್ರವೇಶಿಸಿ ಅಪಾಯ ಸಂಭವಿಸುವದುಂಟು. ಹಾಗೆ ಮಾಡದೆ ಅವುಗಳನ್ನು ಅವನು ತೆಗೆದುಕೊಂಡೊಡನೆಯೆ ತನ್ನ ಇಷ್ಟಲಿಂಗಕ್ಕೆ ತೋರಿಸಿ ಅಂದರೆ ಧರ್ಮಬುದ್ಧಿಯಿಂದ ನಿನ್ನಿಂದ ಉತ್ಪತ್ತಿಯಾದ ಜೀನಸವನ್ನು ಮೊದಲು ನೀನು ಗ್ರಹಿಸು. ಎಂದು ಇಷ್ಟದೇವತೆಗೆ ಸಮರ್ಪಿಸಿದರೆ ಮೇಲೆಹೇಳಿದ ತಂದೆ ಮಗುವಿನ ಪ್ರೇಮದಂತೆ ಜಗದೀಶನ ಕೃಪೆಯು ಆತನ ಮೇಲೆ ಅವಶ್ಯವಾಗಿ ಉತ್ಪನ್ನವಾಗುತ್ತದೆ. ಅಲ್ಲದೆ ಈ ಧರ್ಮಬುದ್ಧಿಯು ಬೆಳವಣಿಗೆಯೊಂದಿಗೆ ಅಂದರೆ ಹೂವು, ಹಣ್ಣುಗಳನ್ನು ತೆಗೆದುಕೊಂಡ ಕೆಲವು ಹೊತ್ತಿನಮೇಲೆ ಅವುಗಳಲ್ಲಿದ್ದ ಕ್ರಿಮಿಗಳು ಅತ್ತಿತ್ತ ಹಾರಿಹೋಗಿ ಅವನ ಆರೋಗ್ಯಕ್ಕೆ ಅನುಕೂಲವಾಗುವದುಂಟು. ಈ ಧರ್ಮಬುದ್ಧಿಯಿಂದ ದಿನದಿನಕ್ಕೆ ಜೀವ, ಪರಮಾತ್ಮರ ಪ್ರೇಮಭಾವವು ವಿಶಾಲವಾಗಿಯೂ ಏಕಾಗಿಯೂ ಬೆಳೆಯುವದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ ಇದನ್ನರಿತೇ ವಿಶ್ವಧರ್ಮಿಗಳು ಪ್ರತಿಯೊಂದು ಜೀನಸಿನಲ್ಲಿಯೂ ಭೂತತ್ವವನ್ನು ಕಳೆದು ಪರಮಾತ್ಮನ ಪ್ರಸನ್ನತೆಯ ಭಾವವನ್ನು ತುಂಬಿ ನಾನು ಮೊದಲುಗೊಂಡು ಸಕಲ ಜಗತ್ತು ಅವನ ಸ್ವರೂಪವೇ ಎಂದು ಅರಿತು ವ್ಯವಹರಿಸಬೇಕೆಂಬ ಉದ್ದೇಶದಿಂದ ಈಪ್ರಸಾದರೂಪ ಧಾರ್ಮಿಕ ನೇಮವನ್ನು ದಿನಾಚರಣೆಯೊಳಗೆ ಧರ್ಮದ ಹತ್ತನೇ ನೇಮವನ್ನಾಗಿ ಗೊತ್ತುಮಾಡಿದ್ದಾರೆ. ಕಾರಣ ಪ್ರತಿಯೊಬ್ಬ ಮಾನವನು ಮೇಲೆ ಹೇಳಿದ ದಿನಚರ್ಯದ, ಧರ್ಮದ ಎಲ್ಲ ನೇಮಗಳನ್ನೂ ಪಾಲಿಸಿ ಅದರಂತೆ ವರ್ತಿಸಿದ್ದೇ ಆದರೆ ಅವಶ್ಯವಾಗಿ ಅವನು ಇಹಪರಗಳಲ್ಲಿ ಸುಖವನ್ನು ಹೊಂದುತ್ತಾನೆ.

| ತಪ್ಪು | ಒಪ್ಪು | ಪುಟ | ಸಾಲು |
|---|---|---|---|

## ಆರೋಗ್ಯಗೀತೆ.

| | | | |
|---|---|---|---|
| ಹುಲ್ಲಸು | ಹಲ್ಲಸು | ೧ | ೧೧ |
| ಸಂಧಿಗಳೊಳು | ಸಂದಿಗಳೊಳು | ೧ | ೧೩ |
| ಕಂಗೆಳೆಮರಿಗೆ | ಕಂಗಳೆಮರಿಗೆ | ೨ | ೭ |

## ಆರೋಗ್ಯ ಧರ್ಮದರ್ಶನ.

| | | | |
|---|---|---|---|
| ಮುಹೊರ್ತ | ಮುಹೂರ್ತ | ೧ | ೮ |
| ಪದ್ಸವರ್ಷ | ಪದ್ಯವರ್ಷ | ೪ | ೨೦ |
| ಹ್ಯಾಗೆ | ಹೇಗೆ | ೬ | ೧೧ |
| ಬುದಿನ್ಮ್ಯಖೋ | ಬುದನ್ಮ್ಯಖೋ | ೭ | ೨೫ |
| ಮಸ್ತಕಂ | ಮಸ್ತಕಃ | ೮ | ೧೬ |
| ಪಾಣಿಗಳ | ಪ್ರಾಣಿಗಳ | ೯ | ೨೧ |
| ವೃಕಲತೆ | ವೃಕ್ಷಲತೆ | ೧೧ | ೪ |
| ಏರಡು ನಾರಿ | ಎರಡು ನಾರಿ | ೧೨ | ೧೯ |
| ಆನಾರೋಗ್ಯ | ಅನಾರೋಗ್ಯ | ೧೫ | ೮ |
| ಹಾರ ( ಇದ್ದಲ್ಲಿ ) | ಅಹಾರ ( ಇರಬೇಕು ) | ೧೫ | ೧೭ |
| ಹುಲ್ಲುಗಳಿಂದ | ಹಲ್ಲುಗಳಿಂದ | ೧೬ | ೧ |
| ಜಗವನ್ನು | ನೈಜವನ್ನು | ೧೬ | ೨೩ |
| ಅತನ | ಆತನ | ೧೭ | ೧೫ |
| ಬ್ರುಶ್ | ಬ್ರಶ್ | ೨೧ | ೭—೧೦ |
| ನಾವಂತಿಗೆ | ಶಾವಂತಿಗೆ | ೨೪ | ೨ |
| ಗಂಥ | ಗಂಧ | ೨೪ | ೮ |
| ಭೋಸ | ಬೋಸ | ೨೪ | ೧೯—೨೧ |
| ವನಸ್ಪತಿಗಳಲ್ಲಿ | ವನಸ್ಪತಿಗಳು | ೨೪ | ೨೭ |

| ತಪ್ಪು | ಒಪ್ಪು | ಪುಟ | ಸಾಲು |
| --- | --- | --- | --- |
| ಆರ್. ಎನ್. | ಆರ್. ಎಸ್. | ೨೫ | ೬ |
| ಮೆಟೀರಿಯಾ | ಮಟೀರಿಯಾ | ೨೫ | ೬ |
| ಆದ್ದರಿಂಪ | ಆದ್ದರಿಂದ | ೨೫ | ೧೫ |
| ಹ್ಯಾಗೆ | ಹೇಗೆ | ೨೯ | ೧೩ |
| ಧರಿಸತಕ್ಕಮ | ಧರಿಸತಕ್ಕದ್ದು | ೩೬ | ೫ |
| ಅರೋಗ್ಯಕ್ಕೆ | ಆರೋಗ್ಯಕ್ಕೆ | ೩೭ | ೪ |
| ವಿಧ್ವಸಂಕ | ವಿಧ್ವಂಸಕ | ೩೯ | ೨೩ |
| ಭಯಗ್ರಸ್ತ | ಭಯಂಕರ | ೪೧ | ೨೩ |
| ಅರಾಧನೆಯು | ಆರಾಧನೆಯು | ೪೨ | ೫ |
| ಆಹೊರಾತ್ರಿ | ಅಹೋರಾತ್ರಿ | ೪೨ | ೨೫ |
| ಕಂಡಕೊಳ್ಳಬೇಕಾದರೆ | ಕಂಡುಕೊಳ್ಳಬೇಕಾದರೆ | ೪೩ | ೧೫ |
| ಬೇಸಿಯು | ಬೇಸಿಗೆಯು | ೪೩ | ೨೭ |
| ಆಫ್ | ಅಪ್ | ೪೫ | ೨ |
| ಆಭಿಧಾನವನ್ನು | ಅಭಿಧಾನವನ್ನು | ೪೬ | ೩ |
| ಒಬ್ಬೊಬ್ಬನೆ | ಒಬ್ಬೊಬ್ಬರೆ | ೫೫ | ೩ |
| ಮರಿ | ಮೊರೆ | ೫೫ | ೯ |
| ವುಂಟಾದ | ಉಂಟಾದ | ೫೫ | ೨೨ |
| ಕಲೆಯು | ಶಿಲೆಯು | ೫೬ | ೧೪ |
| ಧರ್ಮದೊಳನಿಶಂ | ಧರ್ಮದೊಳನಿಶಂ | ೬೨ | ೨೨ |
| ವಿಚಾರೆಸಿದರೆ | ವಿಚಾರಿಸಿದರೆ | ೬೨ | ೨೫ |
| ಅಳೆಯುನಿಗೆ | ಅಳಿಯನಿಗೆ | ೬೩ | ೬ |
| ಲಗ್ನಗವಾದ | ಲಗ್ನವಾಗದ | ೬೩ | ೨೭ |
| ವಿಶ್ವಧರ್ಮಗಳು | ವಿಶ್ವಧರ್ಮಗಳು | ೬೪ | ೪ |
| ಮೂರ್ತಿಗಳನ್ನೂ | ಮೂರ್ತಿಗಳನ್ನು | ೬೫ | ೧೦ |
| ಬಕ್ಷಕ | ಭಕ್ಷಕ | ೭೨ | ೨೬ |
| ಸಮೀಚಯನವಾದ | ಸಮೀಚೀನವಾದ | ೭೪ | ೧೨ |